

## ಕೇಶವಶರ್ಮ.ಕೆ

ಹುಟ್ಟೂರು: ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ತಾಲೂಕಿನ ಅಡ್ಯನಡ್ಕ ಬಳಿಯ ಕೋಡಂದೂರು.
ತಂದೆ: ಕೆ.ಕೆ. ನರಸಿಂಹಭಟ್ಟ
ತಾಯಿ: ಕೆ.ಎನ್. ಸೀತಾ.
ಸಂಗಾತಿ: ಸಚಿತ
ಮಗ: ನಹುಷ
ಮಗಳು: ನಿಯತಿ
ಯಕ್ಷಗಾನದ ಹುಚ್ಚು ಬಹಳ.
ಯಕ್ಷಗಾನದ ಹವ್ಯಾಸಿ ಕಲಾವಿದ
ವಾಸ: ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲೂಕಿನ ಸಿಂಗನ ಮನೆ ಗ್ರಾಮ ಶಾಂತಿನಗರ
ಉದ್ಯೋಗ: ಕನ್ನಡ ಪ್ರಾಧ್ಯಾಪಕ, ಕನ್ನಡಭಾರತಿ, ಕುವೆಂಪು ವಿಶ್ವ ವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ.
ಮಂಗಳೂರು ವಿಶ್ವ ವಿದ್ಯಾನಿಲಯದಿಂದ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ ಕುರಿತು ನಡೆಸಿದ ಸಂಶೋಧನೆಗಾಗಿ ಪಿಎಚ್.ಡಿ. ಪದವಿ.

# ವಸಾಹತುಶಾಹಿ ಪರಿಕಲ್ಪನೆಗಳು

**ಕೇಶವ ಶರ್ಮ ಕೆ.**

ಪುಸ್ತಕ
ವಿಜಯನಗರ
ಬೆಂಗಳೂರು – 560 040.

# ವಸಾಹತುಶಾಹಿ ಪರಿಕಲ್ಪನೆಗಳು

# VASAHATUSHAHI PARIKALPANEGALU

## KEY CONCEPTS - COLONIALISM TERMS

Written By :
**Keshava Sharma K.**
Kannada Bharathi,
Kuvempu University, Gnana Sahyadri,
Shankaragatta, Shimoga - 577451
Mob : 9448730611
**e-mail: dr.keshavasharma.k@gmail.com**

**Published by:**
**DESI PUSTAKA**
NO. 121, 13th Main Road,
M.C. Layout,
Vijaya Nagara
Bengaluru - 560 040
Ph : 080 - 23153558
E-mail: desipustaka@gmail.com

First Impression: 2013

Page: xxii+498=520

**₹: 350/-**

Paper used: 70gsm Ns Book Print

Book Size 1/8 Demmy



**ISBN: 978-93-81577-31-8**

DTP: **Arpuda Mery**

Page Layout: **Nagaraj**

Cover Page: **Ramesh D.K.**

Printed at: **Satyashree Printers Pvt. Ltd.**
Kasturibanagar, Bangalore. Ph.: 26748811

ಜನತೆಯಿಂದಲೇ ಬರುತ್ತದೆ ಪ್ರಭುತ್ವದ ಶಕ್ತಿ
ಆದರೆ ಅದು ಎಲ್ಲಿಗೆ ಬರುತ್ತದೆ?
ಹೇಳು. ಎಲ್ಲಿಗೆ ಬರುತ್ತದೆ?
ಬರಲೇಬೇಕು ಎಲ್ಲಾದರೂ ಒಂದು ಕಡೆಗೆ
ಪೋಲಿಸ್ ಪೇದೆ ಬರುತ್ತಿದ್ದಾನೆ ಸ್ಟೇಷನ್ ಬಾಗಿಲಿಂದ
ಆದರೆ ಎಲ್ಲಿಗೆ ಬರುತ್ತಿದ್ದಾನೆ?

*ವೀಮಾರ್ ಸಂವಿಧಾನದ ಮೊಟ್ಟ ಮೊದಲ (ಬ್ರೆಕ್ಟ್)*

## ಅರ್ಪಣೆ

ನನಗೆ ನೆರಳು ಮತ್ತು ಅನ್ನ ಕೊಟ್ಟ
ಕುವೆಂಪು ವಿಶ್ವವಿದ್ಯಾನಿಲಯಕ್ಕೆ

## ಅರಿಕೆ ಮತ್ತು ಕೃತಜ್ಞತೆ

ನನ್ನ ಜೀವನದ ಸಾರ್ಥಕ ಕ್ಷಣಗಳಲ್ಲಿ ಇದೂ ಒಂದು. ಒಟ್ಟಿಗೆ ಆರು ಪರಿಕಲ್ಪನೆಗಳ ಕೋಶಗಳು ಈಗ ಪ್ರಕಟವಾಗುತ್ತಿದೆ. ಇದಕ್ಕೆ ನಾನು ಅನೇಕ ವರ್ಷ ದುಡಿದಿದ್ದೇನೆ. ಅನೇಕ ದಿನಗಳನ್ನು; ಅನೇಕ ಗಳಿಗೆಗಳನ್ನು ಇದಕ್ಕಾಗಿ ಕಳೆದಿದ್ದೇನೆ. ನನ್ನ ನಿರಂತರ ಕೆಲಸದಿಂದ ಈವತ್ತು ಈ ಸಂಪುಟಗಳನ್ನು ಓದುಗರ ಕೈಯಲ್ಲಿ ಇಡಲು ಸಾಧ್ಯವಾಯಿತು. ಇದು ಈವತ್ತು ನಿನ್ನೆಯ ಕೆಲಸವಲ್ಲ. ಪದಗಳು; ಅವುಗಳ ಹಿನ್ನೆಲೆ; ಅರ್ಥ; ಅವುಗಳನ್ನು ಬಳಸಿಕೊಂಡ ಕ್ರಮಗಳು, ಸಂದರ್ಭಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮತ್ತೆ ಮತ್ತೆ ಬರೆಯಬೇಕಾಯಿತು. ವಿದ್ವಾಂಸರು ಈ ಮೊದಲೇ ಕೆಲವು ಪರಿಕಲ್ಪನೆಗಳ ಕುರಿತು ಹೇಳಿರುವುದನ್ನು ಟಿಪ್ಪಣಿ ಬರೆದುಕೊಂಡು ಮತ್ತೆ ವಿಸ್ತೃತಗೊಳಿಸಿದೆ. ಈ ಮೊದಲು ವಿದ್ವಾಂಸರು ಹೇಳಿದ್ದನ್ನು ಇಲ್ಲಿ ಬಳಸಿಕೊಂಡಿರುವೆ ಮತ್ತು ಅಂಥ ಸಂದರ್ಭದಲ್ಲಿ ಆಯಾ ವಿದ್ವಾಂಸರ ಹೆಸರನ್ನು ಪರಿಕಲ್ಪನೆಗಳ ಕೆಳಗೆ ಉಲ್ಲೇಖಿಸಿದ್ದೇನೆ. ಇದು ಅನೇಕ ವರ್ಷಗಳಿಂದ ಮಾಡಿಕೊಂಡು ಬಂದಿರುವ ಕೆಲಸವಾದ್ದರಿಂದ ಕೆಲವು ಸಂದರ್ಭದಲ್ಲಿ ಆಯಾ ಪರಿಕಲ್ಪನೆಗಳನ್ನು ವಿವರಿಸಿರುವ ವಿದ್ವಾಂಸರ ಉಲ್ಲೇಖ ಮಾಡದೇ ಇದ್ದರೆ ಅದು ಆಕಸ್ಮಿಕ ತಪ್ಪು ಎಂದು ಭಾವಿಸಬೇಕಾಗಿ ಕೋರುತ್ತೇನೆ. ಋಣವನ್ನು ಸೂಚಿಸದೇ ಹೋಗಿದ್ದರೆ ಅದು ಉದ್ದೇಶಿತವಂತೂ ಖಂಡಿತಾ ಅಲ್ಲ.

ಈ ಕ್ಷೇತ್ರಗಳಲ್ಲಿ ಇನ್ನೂ ಅನೇಕ ವರ್ಷಗಳ ತನಕ ಕೆಲಸ ಮಾಡಬಹುದು ಎಂಬುದರ ಅರಿವು ನನಗಿದೆ ಮತ್ತು ಸಾಂಸ್ಥಿಕ ಕೆಲಸ ಮಾಡಿದರೆ ಈ ರೀತಿಯ ಕೋಶಗಳು ಕನ್ನಡಕ್ಕೆ ಮಹತ್ವದ ಕೊಡುಗೆಗಳಾಗಬಹುದು. ನಾನೂ ಇನ್ನು ಕೆಲವು ವರ್ಷ ಈ ಪರಿಕಲ್ಪನೆಗಳ ಕುರಿತಂತೆ ಕೆಲಸ ಮಾಡಬಹುದಿತ್ತು. ಇನ್ನೂ ಹೆಚ್ಚಿನ ದಿನ ಇದರ ಬಗ್ಗೆ ಕೆಲಸ ಮಾಡುವುದು ಕಷ್ಟವೆಂದು ಅನಿಸಿತ್ತು.

ಈ ಪರಿಕಲ್ಪನೆಯ ಕೋಶಗಳ ಕುರಿತು ಒಂದೆರಡೂ ಮಾತುಗಳನ್ನು ಹೇಳಲು ಬಯಸುತ್ತೇನೆ. ಕೆಲವು ಪರಿಕಲ್ಪನೆಗಳನ್ನು ಬೇರೆ ಬೇರೆ ಆಲೋಚನಾ ಪಂಥಗಳು

ಬೇರೆ ಬೇರೆ ರೀತಿಯಲ್ಲಿ ಅನ್ವಯಿಸಿಕೊಂಡಿವೆ. ಆದುದರಿಂದ ಒಂದು ಪರಿಕಲ್ಪನೆಯ ಕೋಶದಲ್ಲಿ ಬಂದಿರುವುದು ಮತ್ತೊಂದರಲ್ಲಿಯೂ ಬಳಸಿಕೊಳ್ಳುವುದು ಅನಿವಾರ್ಯವಾಯಿತು. ಇದನ್ನು ಓದುಗರು ಮನಗಾಣುತ್ತಾರೆ ಎಂದು ಭಾವಿಸಿಕೊಳ್ಳುತ್ತೇನೆ.

ಪರಿಕಲ್ಪನೆಗಳ ಕೋಶಗಳ ಕುರಿತಂತೆ ಕೆಲವರು ನನ್ನೊಂದಿಗೆ ಅಪಸ್ವರವನ್ನು ಎತ್ತಿಕೊಂಡದ್ದೂ ಇದೆ ಮತ್ತೆ ಕೆಲವರು ಈಗಾಗಲೇ ಕನ್ನಡದಲ್ಲಿ ನಿಘಂಟುಗಳಿವೆ, ಪದಕೋಶಗಳಿವೆ ಆದುದರಿಂದ ಇದರ ಅಗತ್ಯವಿದೆಯೇ ಎಂದು ಕೇಳಿದರು. ಅವರ ಪ್ರಶ್ನೆಗೆ ಈ ಸಂಪುಟಗಳೇ ಉತ್ತರ ಕೊಡುತ್ತವೆ. ಆದುದರಿಂದ ಪ್ರತ್ಯೇಕವಾಗಿ ಉತ್ತರಿಸಲಾರೆ. ಕನ್ನಡದ ಮಟ್ಟಿಗೆ ಇದು ವಿಶಿಷ್ಟ ಪ್ರಯತ್ನ ಎನ್ನುವುದನ್ನಂತೂ ಹೇಳಬಲ್ಲೆ. ಇದು ಕೀ ಕಾನ್ಸೆಪ್ಟ್ ಮಾದರಿಯದೂ ಹೌದು. ಇದನ್ನು ಗುರುತಿಸುವಿರಾಗಿ ನಂಬುತ್ತೇನೆ. ನನಗಂತೂ ಇದು ಆತ್ಮ ತೃಪ್ತಿಯನ್ನು ಕೊಟ್ಟಿದೆ.

1. ಸಾಂಸ್ಕೃತಿಕ ಪರಿಕಲ್ಪನೆಗಳು – ಇದರಲ್ಲಿ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಪರಿಕಲ್ಪನೆಗಳಿವೆ. ಇದರಲ್ಲಿನ ಕೆಲವು ಪರಿಕಲ್ಪನೆಗಳನ್ನು ಉಳಿದ ಸಂಪುಟದಲ್ಲಿ ಬಳಸಿಕೊಳ್ಳಲಾಗಿದೆ.
2. ವಿಮರ್ಶೆಯ ಪರಿಕಲ್ಪನೆಗಳು – ಇದರಲ್ಲಿ ವಿಮರ್ಶೆಗಳಿಗೆ ಸಂಬಂಧಿಸಿದ ಪರಿಕಲ್ಪನೆಗಳಿವೆ.
3. ತತ್ವಜ್ಞಾನದ ಪರಿಕಲ್ಪನೆಗಳು – ಇದರಲ್ಲಿ ಭಾರತೀಯ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಪರಿಕಲ್ಪನೆಗಳಿವೆ. ಮೂಲತಃ ತತ್ವಜ್ಞಾನಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ದೊರೆಯುವ ಆಕರಗ್ರಂಥಗಳು ಕಡಿಮೆ. ದೊರೆತ ಆಕರಗಳನ್ನು ಬರೆದಿದ್ದೇನೆ.
4. ವಸಾಹತುಶಾಹಿ ಪರಿಕಲ್ಪನೆಗಳು – ವಸಾಹತು ಕಾಲವು ಅನೇಕ ಪರಿಕಲ್ಪನೆಗಳನ್ನು ಹುಟ್ಟು ಹಾಕಿದೆ. ಇದರಲ್ಲಿ ಕೆಲವು ಪರಿಕಲ್ಪನೆಗಳನ್ನು ಮಾತ್ರವೇ ಚರ್ಚಿಸಲು ಸಾಧ್ಯವಾಯಿತು.
5. ಸ್ತ್ರೀವಾದಿ ಪರಿಕಲ್ಪನೆಗಳು – ಇದರ ಸ್ತ್ರೀವಾದಕ್ಕೆ ಸಂಬಂಧಿಸಿದ ಕೆಲವು ಪರಿಕಲ್ಪನೆಗಳನ್ನು ಮಾತ್ರವೇ ವಿವರಿಸಲಾಗಿದೆ.
6. ಮಾರ್ಕ್ಸ್‌ವಾದಿ ಪರಿಕಲ್ಪನೆಗಳು – ಮಾರ್ಕ್ಸ್‌ವಾದಕ್ಕೆ ಸಂಬಂಧಿಸಿದ ಕೆಲವೇ ಕೆಲವು ಪರಿಕಲ್ಪನೆಗಳನ್ನು ಇಲ್ಲಿ ವಿವೇಚಿಸಲಾಗಿದೆ. ಓದುಗರು ಗಮನಿಸಬೇಕಾದ ಅಂಶವೆಂದರೆ ಈ ಸಂಪುಟಗಳಲ್ಲಿ ಬಂದಿರುವ ಪರಿಕಲ್ಪನೆಗಳಿಗೆ ಒಂದಕ್ಕೊಂದು ಸಂಬಂಧವಿದೆ. ಮೇಲೆ ಹೇಳಿರುವ ಎಲ್ಲಾ ಪರಿಕಲ್ಪನೆಗಳ ಕೋಶಗಳು ಮುಂದಿನ ಅಧ್ಯಯನಗಳಿಗೆ

ಮೆಟ್ಟಿಲುಗಳು ಮಾತ್ರ ಸಾಗಬೇಕಾದ ದಾರಿಯೂ ಉದ್ದವಿದೆ. ಈ ಕ್ಷೇತ್ರಗಳಿಗೆ ಬೇಕಾದ ಮುಂದಡಿಯನ್ನು ಮಾತ್ರವೇ ಇರಿಸಿದ್ದೇನೆ. ಕೆಲವರಿಗೆ ಕೆಲವೇ ವಿಷಯಗಳು ಮಾತ್ರವೇ ಇರುವ ಸಾಧ್ಯತೆ ಇರುವುದರಿಂದ ಒಂದು ಕೋಶದ ಪದಗಳನ್ನು ಮತ್ತೆ ಮತ್ತೊಂದು ಕೋಶಕ್ಕೂ ಬಳಸಿಕೊಳ್ಳಬೇಕಾಯಿತು.

ಇದರ ರಚನೆಯ ಸಂದರ್ಭದಲ್ಲಿ ಮಾರ್ಗದರ್ಶನ ನೀಡಿದ ಹಿರಿಯರಿಗೆ ಮತ್ತು ಕಿರಿಯರಿಗೆ–

ಮಾನ್ಯ ಕುಲಪತಿಗಳಾದ ಪ್ರೊ. ಎಸ್.ಎ. ಬಾರಿಯವರಿಗೆ, ಕುಲಸಚಿವರಾದ ಪ್ರೊ. ಮಲ್ಲಿಕಾ ಘಂಟಿಯವರಿಗೆ, ಸಹೋದ್ಯೋಗಿಗಳಿಗೆ–

ಇದರ ಪ್ರತಿಯೊಂದು ಹಂತದಲ್ಲಿಯೂ ನನ್ನ ಜೊತೆಗೆ ಕೆಲಸ ಮಾಡಿದ ಪ್ರೀತಿಯ ರಮೇಶ್ ಆಚಾರ್, ಕಾವ್ಯಶ್ರೀ, ಸುಮ, ಅರ್ಪುದಮೇರಿ, ದಿನೇಶ್, ಸುಧಾ, ಲೋಕೇಶ್, ರಾಮು, ನಾಗಾರ್ಜುನ, ವಿಠಲ, ರಂಗನಾಥರವರಿಗೆ–

ಪ್ರೀತಿಯ ಮಕ್ಕಳಾದ ನಿಯತಿ, ನಹುಷರಿಗೆ ಮತ್ತು ಹೆಂಡತಿ ಸಬಿತರಿಗೆ, ಅಮ್ಮ, ಅಕ್ಕ, ತಂಗಿ, ತಮ್ಮ –

ಈ ಪ್ರಕಟಣೆಗಳನ್ನು ಉತ್ಸಾಹದಿಂದ ಮತ್ತು ಧೈರ್ಯದಿಂದ ಕೈಗೆತ್ತಿಕೊಂಡ ದೇಸಿ ಪ್ರಕಾಶನದ ಮಾಲೀಕರಿಗೆ ಮುಖಪುಟದ ಚಿತ್ರ ಬರೆದ ಡಿ.ಕೆ. ರಮೇಶ್, ಪುಸ್ತಕವನ್ನು ಮರುವಿನ್ಯಾಸ ಮಾಡಿದ ನಾಗರಾಜ್, ಸುಂದರವಾಗಿ ಮುದ್ರಿಸಿದ ಸತ್ಯಶ್ರೀ ಪ್ರೆಸ್‌ನ ಸಮಸ್ತರು ಮತ್ತು ನಿಮಗೆ.

ಧನ್ಯವಾದಗಳು

**ಕೇಶವ ಶರ್ಮ ಕೆ.**
ಶಂಕರಘಟ್ಟ, ಶಿವಮೊಗ್ಗ

## ಅಕ್ಷರ ಸೂಚಿ


1882ರ ಶಿಫಾರಸ್ಸು
1919ರ ವಿಧಿ
1942ರ ಶಿವಮೊಗ್ಗ
ಅಚಾರಿತ್ರಿಕತೆ
ಅಚ್ಚಿನ ಮೊಳೆ
ಅಧಾರ್ಮಿಕತೆಯ ಪ್ರಶ್ನೆ
ಅಧಿಕಾರದ ನಿರೂಪಣೆಗಳು
ಅಧಿಕಾರದ ಸಂಬಂಧಗಳು
ಅಧಿಕಾರದ ಹೊಸ ಪರಿಭಾಷೆ
ಅಧಿಕಾರ ಮತ್ತು ಕರ್ತವ್ಯ
ಅಧಿಕಾರಶಾಹಿ ಮತ್ತು ಜ್ಞಾನ
ಅಧಿಕಾರಸಂಕರ
ಅಧಿಕೃತ ಜ್ಞಾನ
ಅಧಿಕೃತ ಮತ್ತು ಅನಧಿಕೃತ ಮಾದರಿಗಳು
ಅನಂತತೆ
ಅನುಕರಣಾತ್ಮಕ
ಅನುಕರಣೆ
ಅನುಕರಣೆಯ ತತ್ವ
ಅನುಭವ ಮತ್ತು ನಿರೂಪಣೆ
ಅನುಮಾನ ಮತ್ತು ಮತಾಂತರ
ಅನುವಾದ
ಅನೇಕ ಜ್ಞಾನ ಪರಂಪರೆ
ಅನ್ಯ ತೆರಿಗೆಗಳು
ಅನ್ವೇಷಣೆ
ಅಪೀಲ್ ಮತ್ತು ರಿವ್ಯೂ
ಅಪ್ಪರ್ ಸೆಕೆಂಡರಿ
ಅಭಿರುಚಿ
ಅಭಿವೃದ್ಧಿಯ ಪರಿಕಲ್ಪನೆ
ಅಭಿವ್ಯಕ್ತಾತ್ಮಕ ಸಮಗ್ರತೆ
ಅಮಲ್ದಾರರ ಅಧಿಕಾರ
ಅರಸರಿಗೆ ತೆರಿಗೆಯಿಲ್ಲ
ಅರ್ಚಕರು
ಅವಕಾಶ
ಅವಿಧೇಯ ಚಳುವಳಿ
ಅವೈಯಕ್ತಿಕ ಆಢಳಿತ
ಅಸಹಕಾರ
ಅಸಹಕಾರ ತತ್ವ
ಅಸಾಂದರ್ಭಿಕ ಸಾಂಸ್ಕೃತಿಕ ರೂಪಗಳು
ಅಸ್ತಿತ್ವ ಭಿನ್ನತೆ ಮತ್ತು ಅಸ್ತಿತ್ವ
ಅಸ್ಪೃಶ್ಯತಾ ನಿರೋಧಕ ಸಂಘ
ಅಹಿಂಸಾತತ್ವ
ಆಡಳಿತದಲ್ಲಿ ಪಶ್ಚಿಮದ ಶೈಲಿ
ಆಡಳಿತ ರಚನೆಗಳು
ಆಡಳಿತ ಸುಧಾರಣೆ

ಆಡಳಿತಾಧಿಕಾರ
ಆಢಳಿತ
ಆಢಳಿತ ಇಂಗ್ಲಿಶ್
ಆದಾಯ ತೆರಿಗೆ
ಆಧುನಿಕ ಚರಿತ್ರೆ
ಆಧುನಿಕತೆ
ಆಧುನಿಕತೆ ಮತ್ತು ಅಧಿಕಾರ
ಆಧುನಿಕ ಜ್ಞಾನ
ಆಧುನಿಕ ಮೀಮಾಂಸೆ
ಆಧುನಿಕ ರಾಷ್ಟ್ರ
ಆಧುನೀಕರಣದ ಪ್ರಕ್ರಿಯೆ
ಆಮದು ರೂಪಗಳು
ಆಯ್ಕೆ
ಆರ್ಡರ್
ಆಸ್ತಿತೆರಿಗೆ
ಆಳುವ ಆಳಿಸಿಕೊಳ್ಳುವ ಸಂಸ್ಕೃತಿಗಳ ದ್ವಂದ್ವಾತ್ಮಕ ಸಂಬಂಧ
ಆಳುವ ಮನುಷ್ಯರು ಮತ್ತು ನಮ್ಮ ಬುದ್ಧಿಜೀವಿಗಳು
ಆಳ್ವಿಕೆಯ ಪರಿಭಾಷೆ
ಇಂಗ್ರೆಜಿ ರಾಜ್ಯದ ದಂಡಕ
ಇಂಗ್ರೇಜಿ ಕಾಯಿದೆಯ ಇಕ್ಕಟ್ಟು
ಇಂಗ್ಲಿಶ್‌ದೇಶೀಸಂಸ್ಕೃತ
ಇಂಗ್ಲಿಷ್ ಓದಿದವರು
ಇಂಗ್ಲಿಷರ ಮತ್ತೊಂದು ರೂಪ
ಇಂಗ್ಲಿಷಿನ ಚಾಕ್ರಿ
ಇಂಗ್ಲಿಷಿನಲ್ಲಿ ಮೂಲ ವ್ಯುತ್ಪತ್ತಿ
ಇಂಗ್ಲಿಷ್ ಕಂಟ್ರೋಲ್ ಆ್ಯಕ್ಟ್
ಇಂಗ್ಲಿಷ್ ಕಲಿಕೆಯ ಪರಿಣಾಮ
ಇಂಗ್ಲಿಷ್ ಭಾಷಿಕ ಕಾಲುವೆ
ಇಂಗ್ಲಿಷ್ ಭಾಷೆಯ ಹೇರುವಿಕೆ
ಇಂಗ್ಲಿಷ್ ಸ್ಕೂಲ್‌ನ ಬಿಂಬಗಳು
ಇಂಗ್ಲೀಶರ ವಿರುದ್ಧ ಪಾಳೆಯಗಾರರು
ಲಾವಣಿ
ಇಂಗ್ಲೆಂಡ್
ಇಂಗ್ಲೆಂಡಿನಲ್ಲಿ ಶೈಕಣಿಕ ಪರಿವರ್ತನೆ
ಇಂಗ್ಲಿಷ್ ನೀತಿ 1835
ಇಂಗ್ಲಿಷ್ ಮೆಡಿಸಿನ್
ಇಂಡಿಯಾ ಕೌನ್ಸಿಲ್
ಇಂಡಿಯಾದ ಸರ್ಕಾರದ ರಚನೆ
ಇಂದ್ರಿಯ
ಇನಾಂ
ಈರುಳ್ಳಿ ಕಳ್ಳ
ಈಸೂರು ಚಳುವಳಿ
ಉತ್ತರಕನ್ನಡ ಮತ್ತು ದಕ್ಷಿಣ ಕನ್ನಡದ ಜಿಲ್ಲೆ
ಉದಾರವಾದ ಮತ್ತು ಸುಧಾರಣೆ
ಉದಾರವಾದಿಗಳ ದೃಷ್ಟಿಕೋನ
ಉದಾರವಾದಿ ಚಿಂತನೆ ಮತ್ತು ಆಳುವವರು
ಉದಾರವಾದಿ ನೀತಿ
ಉದ್ದೇಶಿತ ರಾಜಕೀಯ ಚಟುವಟಿಕೆ
ಉದ್ಯೋಗ
ಉನ್ನತ ಮಾನವತಾವಾದ
ಉಪವಾಸ
ಉಪ್ಪಿನ ತೆರಿಗೆಯ ಏಕತೆ
ಉಪ್ಪಿನ ಸತ್ಯಾಗ್ರಹ
ಉಪ್ಪು
ಉಭಯ ದಾಸ್ಯ
ಉಮಾಪತಿ ಮ್ಲೇಚ್ಛ ದ್ರವ್ಯಗಳು
ಋಣಾತ್ಮಕ ವರ್ಗ ಪ್ರಜ್ಞೆ
ಎಕ್ಕೆಗೆ ತೆರಿಗೆ

ಎಕ್ಸೈಸ್ ಸುಂಕ
ಎಜುಕೇಶನ್ ಏಕ್ಟ್
ಎನ್‌ಲೈಟನ್ ಯುಗದ ತಾತ್ವಿಕತೆ
ಎರಡನೆಯ ಬಾರ್ಡೋಲಿ
ಎರಡು ಭೂಕಂದಾಯ
ಎರಡು ಕೋರ್ಟು
ಎರಡು ಭಾಷೆ ಮತ್ತು ಎರಡು ಸಂಸ್ಕೃತಿಯ ಪ್ರಶ್ನೆ
ಏಕಕೇಂದ್ರಿತ ಶಿಕ್ಷಣ
ಏಕರೂಪದಲ್ಲಿ ಇರದ ಕಂದಾಯ
ಏಜೆಂಟರು ಮಧ್ಯವರ್ತಿಗಳು
ಐಗಳ ಮಠ ಮತ್ತು ಇಂಗ್ಲಿಷ್ ಸ್ಕೂಲ್
ಐರೋಪ್ಯೀಕರಣ
ಒಂದು ಅಧಿಕಾರ ಒಂದು ಪ್ರದೇಶ ಮತ್ತು ಮನೋಸ್ಥಿತಿ
ಒಟ್ಟು ಉತ್ಪತ್ತಿ
ಓದಿನ ಸ್ವಾತಂತ್ರ್ಯ
ಓರಿಯಂಟಲಿಸಂ
ಓರಿಯಂಟಲಿಸಂಗೆ ಪ್ರತಿಕ್ರಿಯೆ
ಓರಿಯಂಟಲಿಸಂನ ಎದುರು ಕೆಲವು ಪ್ರಶ್ನೆಗಳು
ಓರಿಯಂಟಲಿಸಂನ ಮೂರು ವ್ಯಾಖ್ಯಾನಗಳು
ಕಂದಾಯ ಆರ್ಥಿಕ ನೀತಿ
ಕಂದಾಯದ ನಿಯಮ
ಕಂದಾಯದ ಪುನರ್ ನಿಗದಿ
ಕಂದಾಯದ ಪ್ರತಿಕೂಲಗಳು
ಕಂದಾಯದ ರಾಜಕಾರಣ
ಕಂದಾಯದ ವಿರೋಧ
ಕಂದಾಯದ ಸಮಸ್ಯೆ
ಕಂದಾಯ ನೀತಿ
ಕಂದಾಯ ಪಾವತಿ ಆದ ಮೊಬಲಗು
ಕಂದಾಯ ಮತ್ತು ಯುರೋಪಿಯನ್ ಅರ್ಥಶಾಸ್ತ್ರ
ಕಂದಾಯ ಮತ್ತು ಹಣದ ಸಿದ್ಧಾಂತ
ಕಂದಾಯ ರಶೀದಿ
ಕಂಪೆನಿ ಪರಿಭಾಷೆಗಳು
ಕಂಪೆನಿಯಿಂದ ಸಾಲ
ಕಂಪೆನಿ ಸರಕಾರ
ಕನ್ನಡದಲ್ಲಿ ಶೀಘ್ರಲಿಪಿ
ಕನ್ನಡದ ಶಾಲೆ
ಕಮಿಷನ್ ಆಧಿಪತ್ಯ
ಕಮಿಷನರ್
ಕಮೆಂಡೇಶನ್
ಕರನಿರಾಕರಣೆಯ
ಕರನಿರಾಕರಣೆಯ ತತ್ವ
ಕರನಿರಾಕರಣೆಯ ತತ್ವಜ್ಞಾನ
ಕರಾರು
ಕರಾರು ಮತ್ತು ವಿಸ್ತರಣೆ
ಕರ್ನಾಟಕ ಗತ ವೈಭವ
ಕರ್ನಾಟಕದಲ್ಲಿ ವಸಾಹತು ಶಿಕ್ಷಣ ಸಂಸ್ಥೆಗಳು
ಕಲಸು ಮೇಲೋಗರ
ಕಲೆಕ್ಟರ್
ಕಲೆಕ್ಟರ್ ಮನ್ರೊ
ಕಲ್ಪಿತಕುಲ
ಕಾಡಿನ ಜನರ ಸತ್ಯಾಗ್ರಹ
ಕಾದಂಬರಿ ಮತ್ತು ಕನ್ನಡ ಸಾಹಿತ್ಯ ವಾಸ್ತವಿಕತೆಯ ಮಾದರಿಗಳು
ಕಾದಂಬರಿ ಮತ್ತು ಚರಿತ್ರೆ
ಕಾನೂನಿನ ಅಧಿಕೃತತೆ
ಕಾನೂನು ಮತ್ತು ಸರಕಾರ ಹಾಗೂ ಜ್ಞಾನ

ಕಾನೂನು ರೂಪಿಸುವವರು ಮತ್ತು ಕಾನೂನು ಕೊಡುವವರು
ಕಾನೂನು ಸಂಹಿತೆಗಳು
ಕಾಫಿ ಎಸ್ಟೇಟ್
ಕಾಫಿ ಕಂದಾಯ
ಕಾಫಿ ಬೆಳೆ
ಕಾಮನ್ ಲಾ
ಕಾಯಿದೆ ಭಂಗ ಕರನಿರಾಕರಣೆ
ಕಾಲ ಮತ್ತು ಸ್ಥಳ
ಕಿರುಗಣ ರಾಜ್ಯ
ಕುರುಗೋಡು ಕೈಫಿಯತ್ತು
ಕುಳಪಾಲು
ಕೂಲಿಗೆ ಮೌಲ್ಯ
ಕೃಷಿ
ಕೃಷಿ ಬ್ಯಾಂಕ್
ಕೃಷಿಯ ವ್ಯಾಖ್ಯಾನಗಳು
ಕೈಗಾರಿಕೆ
ಕೈಗಾರಿಕೆ ಮತ್ತು ಬಂಡವಾಳವಾದ
ಕೋರ್ಟ ಪದ್ಧತಿ
ಕ್ಯಾನನ ಮೂಗು
ಕ್ಯಾನಿಂಗ್
ಕ್ಲಾಸಿಸಿಸ್ಟ್ ಮತ್ತು ಆಂಗ್ಲೆಸಿಸ್ಟ್
ಖಟ್ಲೆ
ಖಸ್ತು ದುರಸ್ತು
ಖಳನಾಯಕರು
ಖಾಯಂ ಗುತ್ತಾ ಹಿಡುವಳಿ
ಖಾಯಂ ಜಮೀನ್ದಾರಿ ಪದ್ಧತಿ
ಖಾಯಂ ಜಮೀನ್ದಾರಿ ಪದ್ಧತಿ
ಖಾಯಂ ಜಮೀನ್ದಾರಿ ಪದ್ಧತಿಯ ಅನುಕೂಲಗಳು
ಖಾಲಿಜಾಗ ಮತ್ತು ಬರಹ
ಖಾಸಗಿ ಆಸ್ತಿ ಭೂ ಕಂದಾಯ
ಖಾಸಗಿ ಆಸ್ತಿ ಮತ್ತು ಸರಕಾರ
ಖಾಸಗಿ ಕಾನೂನು
ಗಣಪತಿ ಉತ್ಸವ
ಗಾಂಧಿ ಅರ್ಥ ವ್ಯವಸ್ಥೆ
ಗಾಂಧಿ ತತ್ವ
ಗಾಂಧಿ ಮತ್ತು ನೆಹರೂ ಮಾದರಿ
ಗಾಂಧಿ ಸಿದ್ಧಾಂತ
ಗಾಡಿನ್ ಸಾಹೇಬ ಮತ್ತು ಯೆಲಪಾಟ್ ಸಾಹೇಬ
ಗುಡ್ಡಬಾಂದು
ಗುಮಾಸ್ತರ ಸಾಂಸ್ಕೃತಿಕ ಸನ್ನಿವೇಶ
ಗುಮಾಸ್ತರು
ಗುಮಾಸ್ತರು
ಗುರುಕುಲ ಕಥಾವಳಿ
ಗೇಣಿ
ಗೊಬ್ಬರ
ಗ್ರಾಂಟ್ ಎಡ್‌ಸ್ಕೂಲ್
ಗ್ರಾಂಟನ ನಿಲುವು
ಗ್ರಾಮ ಪಂಚಾಯತಿ
ಗ್ರಾಮರ್
ಗ್ರೀಕ್ ಕೇಂದ್ರ
ಗ್ರೇಟ್ ಡಿಪ್ರೆಶನ್
ಗ್ರೇಟ್ ಬ್ರಿಟನಿನ ಕೃಷಿಕ್ಷೇತ್ರ
ಗ್ರೇಟ್ ಯುರೋಪ್
ಚರಿತ್ರೆಯ ನೈಜ ವ್ಯಾಖ್ಯೆಗಳು?
ಚಲೇಜಾವ್
ಚಹರೆಗಳು
ಚಾರಿತ್ರಿಕ ನಿರೂಪಣೆಗಳು
ಚಾರಿತ್ರಿಕ ವಿಕಾಸಶೀಲತೆ
ಚಾರಿತ್ರಿಕ ಸಾಂಸ್ಕೃತಿಕ ರೂಪಗಳು

ಚಾರಿತ್ರಿಕ ಹೊಸತನ
ಚಾರ್ಟರ್ ಎಕ್ಟ್ ವಸ್ತು ನಿಷ್ಠಜ್ಞಾನ
ಜಡ ಮತ್ತು ವಸ್ತುನಿಷ್ಠ
ಜನನ ಮರಣ
ಜಪಾನಿ ಪದ್ಧತಿ
ಜಪ್ತಿ
ಜಮಾಬಂದಿ
ಜಮೀನು ಅಳತೆಯ ಪದ್ಧತಿ
ಜಮೀನು ಸುಧಾರಣೆ
ಜಾತ್ಯಾತೀತ
ಜಿಲ್ಲಾ ವಿಭಜನೆ
ಜುಲ್ಮಾನೆ ನೋಟೀಸ್
ಜ್ಞಾನಕಸಿ
ಜ್ಞಾನಕೇಂದ್ರತೆಯ ಅಹಂಕಾರ
ಜ್ಞಾನದ ಪ್ರಾಕ್ತನ ಶಾಸ್ತ್ರ
ಜ್ಞಾನದ ಸ್ಥಳಾಂತರ
ಜ್ಞಾನ ಮಾದರಿಗಳ ಸೀಮಿತ ಚೌಕಟ್ಟು
ಜ್ಞಾನಮೌಲ್ಯ
ಜ್ಞಾನಶಿಸ್ತು
ಜ್ಞಾನಶಿಸ್ತುಗಳ ಪ್ರಶ್ನೆ
ಟೆನೆನ್ಸಿ ಕಾಯಿದೆ
ಡಾಕ್ಯುಮೆಂಟರಿ ಕಾದಂಬರಿ
ಡಿಫೆನ್ಸ್ ಆಫ್ ಇಂಡಿಯಾ
ಡಿ.ಸಿ.
ಡಿಂ ಮತ್ತು ಮಿಕ್ಕಿ
ತಾಲ್ಲೂಕು ಜಮಾಬಂದಿ
ತುಳು ಪ್ರಾಂತ್ಯ
ತೆರಿಗೆ
ತೆರಿಗೆಗಳನ್ನು ವಿಧಿಸುವುದು ನಿರ್ಧರಿಸುವುದು
ತೆರಿಗೆಗಳ ಪರಿವರ್ತನೆ
ತೆರಿಗೆ ಮತ್ತು ಅಭಿವೃದ್ಧಿ
ತೆರಿಗೆ ವಸೂಲಾತಿ
ತೌಲನಿಕ ಅಧ್ಯಯನ
ತ್ರಿಭಾಷಾ ಸೂತ್ರ
ದಂಗೆ
ದಂಡದ ಪರಿಭಾಷೆ
ದಂಡಿ ಯಾತ್ರೆ
ದಕ್ಷತೆ
ದತ್ತು ಮಕ್ಕಳಿಗೆ ಹಕ್ಕಿಲ್ಲ
ದತ್ತು ಸ್ವೀಕಾರ
ದತ್ತು ಸ್ವೀಕಾರ ಮತ್ತು ದಂಗೆ
ದಮನದ ಪ್ರಕ್ರಿಯೆಗಳು
ದಿ ಗ್ರಾಂಟ್ ಆಫ್ ದಿವಾನಿ
ದಿವಾನರು
ದಿವಾನಿ
ದಿವಾನಿ ಹಕ್ಕು
ದುರ್ಬೀನು
ದೂರವಾಣಿ
ದೃಶ್ಯ ರೂಪದಲ್ಲಿ ಬ್ರಿಟೀಶರು
ದೇವಭಾಷೆ
ದೇಸಿವಾದ
ದೊರೆಗಳು
ದ್ವಿಭಾಷಿಕ ಏಕಾಂತವಾದಿಗಳು
ದ್ವಿಮಾದರಿಯ ಆಢಳಿತ ಪದ್ಧತಿ
ಧರ್ಮಯುದ್ಧ
ಧಾರ್ಮಿಕದೃಷ್ಟಿ
ಧಾರ್ಮಿಕ ರಾಜಕಾರಣ
ನಡಾವಳಿ
ನಮ್ಮ ಅನನ್ಯತೆ
ನರಗುಂದದ ಲಾವಣಿ
ನರಬಲಿನಿಷೇಧ

ನವಚರಿತ್ರೆ
ನವಯುಗದ ನಾಯಕರು
ನವಾಬ ದೌಲತ್
ನರ್ವೋದಯ ಸಾಹಿತ್ಯದ ಪ್ರಮುಖ ಪರಿಭಾಷೆಗಳು
ನಾಗರಿಕತೆಗಳ ಒಪ್ಪಂದ
ನಾಗರಿಕತೆ ಮತ್ತು ವಾಣಿಜ್ಯ ನೀತಿ
ನಾಗರಿಕ ಸಮಾಜದ ಸತ್ಯ
ನಾಲ್ಕನೆಯ ಮೈಸೂರು ಯುದ್ಧ 1799
ನಾವು ಮತ್ತು ಅವರು
ನಿಘಂಟುಗಳು ಮತ್ತು ವ್ಯಾಕರಣ
ನಿಯಂತ್ರಣ
ನಿಯಂತ್ರಣ ಮತ್ತು ಪ್ರಜ್ಞೆ
ನಿಯಂತ್ರಣ ಮತ್ತು ವ್ಯಕ್ತಿ
ನಿಯಮಬದ್ಧ ನಿರೂಪಣೆ
ನಿರಂಕುಶಮತಿತ್ವ
ನಿರಾಕರಣೆ
ನಿರಾಕರಣೆ ಮತ್ತು ಸ್ವಅನನ್ಯತೆ
ನಿರಾಕರಣೆಯ ಮನೋಸ್ಥಿತಿ
ನಿರೂಪಕರು
ನಿರ್ಲಕ್ಷ್ಯ
ನಿರ್ವಸಾಹತೀಕರಣದ ಬಹುರೂಪ
ನಿರ್ವಾಸಹಾತೀಕರಣದ ಪ್ರಶ್ನೆ
ನಿಶಸ್ತ್ರಕಾಯಿದೆ
ನಿಸರ್ಗ
ನೀತಿಸಂಹಿತೆ
ನೆಹರೂ ಚಿಂತನೆ
ನೇಗಿಲು
ನೇಟಿವ್
ನೇರ ಆಡಳಿತ
ನೇರ ಕಂದಾಯ
ನೇಶನ್
ನೇಶನ್ ಮತ್ತು ಸ್ಟೇಟ್
ನೈತಿಕನಿಲುವು ವೈಯಕ್ತಿಕತೆಯ ವಿಕಾಸ
ನೈತಿಕ ಮೌಲ್ಯದ ವಿಸ್ತರಣೆ
ನ್ಯಾಯ ತೀರ್ಮಾನದ ಹಕ್ಕು
ನ್ಯಾಯಧರ್ಮ ಸಮಿತಿ
ನ್ಯಾಯ ವಿಧೇಯಕ
ಪಂಚಮ ಪ್ರೈಮರಿ ಶಾಲೆ
ಪಂಚಾಯಿತಿ
ಪಂಚಾಯಿತಿ ತೆರಿಗೆ
ಪಗಾರ
ಪಟೇಲರು
ಪಟ್ವಾನಿಗದಿ
ಪಠ್ಯಕೇಂದ್ರಿತ ಆಲೋಚನೆ
ಪಠ್ಯಗಳ ಪುನರ್ರಚನೆ
ಪಠ್ಯಗಳು
ಪಠ್ಯ ಪುಸ್ತಕಗಳು
ಪತ್ರಿಕಾ ನಿಬಂಧನೆ
ಪರ ಮತ್ತು ವಿರೋಧ
ಪರಿವರ್ತನೆಗಳ ಪರ್ವಕಾಲ
ಪಶ್ಚಿಮದ ತದ್ವಿರುದ್ಧ ಚಿಂತನೆಗಳು
ಪಶ್ಚಿಮದ ನಾಗರಿಕತೆಯ ವಿಸ್ತರಣೆ
ಪಶ್ಚಿಮದ ಪಠ್ಯಗಳು
ಪಶ್ಚಿಮದ ರೊಮಾಂಟಿಕ್
ಪಾಠಗಳು
ಪಾಪ ನಿವೇದನೆ
ಪಾಶ್ಚಾತ್ಯ ಜ್ಞಾನ ಮತ್ತು ವಿಜ್ಞಾನಗಳ ಅಧ್ಯಯನ
ಪಾಶ್ಚಾತ್ಯೀಕರಣ
ಪಾಳೆಯಗಾರರು
ಪುನರುಜ್ಜೀವನ ಚಳುವಳಿ

ಪುರಾಣಗಳ ಅನುಸಂಧಾನ
ಪೆನ್ನುಗಳು
ಪೋಲಿಸ್
ಪೋಲಿಸ್ ಗೈಡ್
ಪೌರ
ಪೌರನೀತಿ
ಪೌರಾತ್ಯ ರಾಷ್ಟ್ರೀಯತೆ
ಪೌರಾತ್ಯವಾದದ ಆಧುನಿಕ ಯುಗದ ಅಧ್ಯಯನಶಾಸ್ತ್ರ
ಪೌರಾತ್ಯವಾದದ ಪರಿಕರ
ಪೌರಾತ್ಯವಾದವು ಒಂದು ಆಲೋಚನಾ ಕ್ರಮ
ಪೌರಾತ್ಯವಾದ ಸಂಸ್ಕೃತಿ ವಿಮರ್ಶೆ
ಪ್ಯಾಸಿವ್ ರೆಸಿಸ್ಟೆನ್ಸ್
ಪ್ರಜಾಪಕ್ಷ
ಪ್ರಜಾ ಪ್ರತಿನಿಧಿ ಸಭೆ
ಪ್ರಜಾಪ್ರತಿನಿಧಿ ಸಭೆ ಮತ್ತು ಅದರ ಪ್ರಾತಿನಿಧಿಕತೆ
ಪ್ರಜೆ
ಪ್ರತಿಅಧಿಕಾರ
ಪ್ರತಿಚರಿತ್ರೆ
ಪ್ರತಿಜ್ಞಾನ
ಪ್ರತಿಜ್ಞೆ
ಪ್ರತಿಬಿಂಬ
ಪ್ರತಿರೋಧ
ಪ್ರತಿರೋಧದ ಆಯ್ಕೆಗಳು
ಪ್ರತಿರೋಧ ಮತ್ತು ಆತ್ಮಕೇಂದ್ರಿತ ಶಕ್ತಿ
ಪ್ರತಿವ್ಯೂಹ ರಚನೆ
ಪ್ರಧಾನ ಸಂಸ್ಕೃತಿ
ಪ್ರಭುತ್ವದ ನಿರ್ವಚನ
ಪ್ರಭುತ್ವದ ವ್ಯಾಖ್ಯಾನ
ಪ್ರಭುತ್ವದ ಸಾಂದರ್ಭಿಕ ವ್ಯಾಖ್ಯಾನಗಳು
ಪ್ರಭು ಸಂಹಿತೆಗಳು
ಪ್ರಯೋಗ ಕೇಂದ್ರಿತ ಆಡಳಿತ
ಪ್ರಯೋಗ ಶಾಲೆ
ಪ್ರಯೋಜನ ಸಿದ್ಧಾಂತ
ಪ್ರಸಂಗ
ಪ್ರಾತಿನಿಧೀಕರಣ ತತ್ವ
ಪ್ರಾದೇಶಿಕ ಜ್ಞಾನ
ಪ್ರಾದೇಶಿಕತೆ ಮತ್ತು ಏಕತೆ
ಪ್ರಾದೇಶಿಕತೆ ಮತ್ತು ಯೂರೋಪಿನ ವಿಶ್ವಾತ್ಮಕತೆ
ಪ್ರಾದೇಶಿಕತೆ ಮತ್ತು ಸಮತೋಲನತತ್ವ
ಪ್ರಾದೇಶಿಕತೆ ಸಂಸ್ಕೃತಿ ಮತ್ತು ಕೃಷಿ
ಪ್ರಾದೇಶಿಕ ಸಂಸ್ಕೃತಿ ಆರ್ಥಿಕ ಅಭಿವೃದ್ಧಿ
ಪ್ಲಾಂಟೇಶನ್ ಪದ್ಧತಿ
ಫೌಜುದಾರಿ
ಫ್ಯಾನನ್ ವಾದ
ಫ್ಯೂಡಲ್ ಲಾರ್ಡ
ಫ್ಯೂಡಲ್ ಲಾರ್ಡ ಮತ್ತು ಫ್ಯೂಡಲ್ ಸೊಸೈಟಿ
ಫ್ಯೂಢಲ್ ಸಂಸ್ಥೆಯೊಂದಿಗೆ ಹೋಲಿಕೆ
ಬಂಟಿಂಕ್ ಮತ್ತು ಅವನ ಉದಾರವಾದಿ ನಿಲುವು
ಬಂಡವಾಳವಾದ
ಬಂಡವಾಳವಾದದೊಂದಿಗೆ ಸಂವಾದ
ಬಂಡವಾಳವಾದ ಮತ್ತು ನವ್ಯವಿಮರ್ಶೆ
ಬದಲಾದ ಕ್ಯಾಲೆಂಡರ್
ಬದಲಾದ ವ್ಯಾಖ್ಯಾನಗಳು
ಬರಹ ಮತ್ತು ಸಂಸ್ಕೃತಿ
ಬಹಿಷ್ಕಾರ
ಬಹು ದಾರಿ ಗಳು

ಬಹುರೂಪದ ನೀತಿ
ಬಾಲಕಿಯರ ಶಾಲೆ
ಬಾಲ್ಯ ವಿವಾಹ
ಬಾಸೆಲ್ ಮಿಶನ್‌ಪ್ರೆಸ್
ಬಾಸೆಲ್ ಶಾಲೆ
ಬುಡಕಟ್ಟು ಮತ್ತು ಯುರೋಪಿಯನ್ ಸಂಸ್ಕೃತಿ
ಬೂರ್ಜ್ವಾ ವರ್ಗಗಳು
ಬೂರ್ಜ್ವಾ ವರ್ಗದ ಪ್ರತಿಕ್ರಿಯೆ
ಬೂರ್ಜ್ವಾ ವರ್ಗ ಮತ್ತು ಆಧುನಿಕತೆ
ಬೆನಿಫಿಶಿಯರಿ
ಬೆಳೆ ಮತ್ತು ಮಾರುಕಟ್ಟೆ
ಬೇರುಗಳಿಲ್ಲದ ಶಿಕ್ಷಣ ಕ್ರಮ
ಬೇರೆ
ಬೈಬಲ್
ಬೌದ್ಧಿಕ ಏಕಾಂತವಾದಿ ಚಿಂತನೆಯ ಕ್ರಮ
ಬೌದ್ಧಿಕ ರಾಷ್ಟ್ರೀಯತೆ
ಬೌದ್ಧಿಕ ಸಂಕರ
ಬ್ರಹ್ಮಚರ್ಯ
ಬ್ರಾಹ್ಮಣರು
ಬ್ರಿಟೀಶರು ಅವರು ಮತ್ತು ನಾವು ದೇಶೀಯರು ಹೊಸ ನುಡಿಗಟ್ಟುಗಳು
ಬ್ರಿಟೀಶರು ಮತ್ತು ಜ್ಞಾನ
ಬ್ರಿಟೀಶ ಸರಕಾರದ ಬಡ್ಡಿ ವ್ಯವಹಾರ
ಬ್ರಿಟೀಶ್ ರಾಜಕಾರಣದ ಮೂರು ಮುಖಗಳು
ಬ್ರಿಟೀಶ್ ಸರಕಾರದ ಉತ್ಪನ್ನ
ಭಕ್ತಿಯ ಹೊಸ ರೂಪ
ಭಗವದ್ಗೀತೆ
ಭಗವದ್ಗೀತೆ ಮತ್ತು ನೆಹರೂ
ಭರತಖಂಡದ ಜಮೀನುದಾರರ ಸಂಸ್ಥೆ
ಭಾರತೀಯ ಕಾವ್ಯ ಮೀಮಾಂಸೆ
ಭಾರತೀಯ ಧಾರ್ಮಿಕತೆ
ಭಾರತೀಯ ರಸ ಸಿದ್ಧಾಂತ
ಭಾವಗೀತೆ ಮತ್ತು ವ್ಯಕ್ತಿ ಕೇಂದ್ರಿತ ಚಿಂತನೆ
ಭಾವಗೀತೆ ಮತ್ತು ವ್ಯಕ್ತಿ ಕೇಂದ್ರಿತ ಸಂಸ್ಕೃತಿ
ಭಾಷಿಕ ಅಭಿವೃದ್ಧಿ
ಭಾಷೆಯ ಪ್ರಮಾಣೀಕರಣ
ಭೂ ಕಂದಾಯ
ಭೂ ಕಂದಾಯ ಶಿರಸಿ ಸಿದ್ದಾಪುರ
ಭೂಮಿಯ ಕ್ರಯಪತ್ರದ ಧಾಟಿ
ಭೂಮಿ ಹಕ್ಕು ಕಾನೂನು
ಭೂ ಸಂಪನ್ಮೂಲ
ಭೂ ಸುಧಾರಣೆ ಕಾಯಿದೆ
ಭೂಸ್ಥಿತಿ
ಭೌತಿಕ ಪರಿಸರದ ಬದಲಾವಣೆ
ಭೌತಿಕ ಮತ್ತು ಬೌದ್ಧಿಕ ಕೆಲಸಗಾರರು
ಭೌತಿಕ ಯಜಮಾನಿಕೆ ಬೌದ್ಧಿಕ ಯಜಮಾನಿಕೆ
ಭೌತಿಕ ರೂಪ
ಮಂಜೂರಾತಿ
ಮಂತ್ರಾಲೋಚನ ಸಭೆ
ಮತಾಂತರ
ಮದರಸ ಮತ್ತು ಸಂಸ್ಕೃತ ಕಾಲೇಜು
ಮದ್ಯಪಾನ ವಿರೋಧ
ಮಧ್ಯಯುಗದ ವ್ಯಾಪಾರ
ಮನಸ್ಸಿನ ಚರಿತ್ರೆ
ಮನಸ್ಸಿನ ಮೇಲೆ ನಿಯಂತ್ರಣ
ಮನುಷ್ಯರ ಬಟ್ಟೆಗಳು
ಮನ್ರೋವಿನ ರೊಮಾಂಟಿಕ್ ಶೈಲಿ
ಮಲಬಾರ್ ಟೆನೆನ್ಸಿ ಕಾಯಿದೆಗೆ ಪ್ರತಿಭಟಣೆ

ಮಹಲ್ವಾರಿ ಪದ್ಧತಿ
ಮಾಡರ್ನ್ ಪುಂಗಿ
ಮಾತು ಬರಹ
ಮಾರುಕಟ್ಟೆ
ಮಿಶನರಿ ಮತ್ತು ವೈಸರಾಯ್‌ಗಳು
ಮಿಶನರಿಗಳು
ಮಿಶನರಿಗಳು ಮತ್ತು ಶಿಕ್ಷಣ
ಮಿಶನರಿಗಳು ಮತ್ತು ಶಿಕ್ಷಣದಲ್ಲಿ ಉದಾರತೆ
ಮಿಶನರಿ ಸಂಘ
ಮುಂಬಯಿಯಲ್ಲಿ ರಾಷ್ಟ್ರೀಯ ಪಂಚ ಕೋರ್ಟಿನ ಸ್ಥಾಪನೆ
ಮುಕ್ತಾಯವಾಗದ ವಸಾಹತು ಪ್ರಶ್ನೆ
ಮುಟ್ಟುಗೋಲು
ಮುದ್ರಣ
ಮುದ್ರಣಬಂಡವಾಳದಪ್ರಶ್ನೆ
ಮುದ್ರಣ ಮತ್ತು ಬರಹ
ಮುಷ್ಟಿ ಫಂಡಿನ ಶಾಲೆಗಳು
ಮೂರನೆಯ ಖಾಲಿ ಜಾಗ
ಮೂರನೆಯ ಜಗತ್ತಿನ ಬುದ್ಧಿಜೀವಿಗಳು
ಮೂರನೆಯ ಮೈಸೂರು ಯುದ್ಧ (1790–1792)
ಮೂರ್ತಿ ಪೂಜೆ
ಮೆಕಾಲೆಮಿನಿಟ್
ಮೆಕೆಂಜಿ ನಿಲುವು
ಮೆಟಾಕಾಘ ಮತ್ತು ಉದಾರವಾದಿ ಚಿಂತನೆ
ಮೆಟ್ರಿಕ್ ಶಾಲೆಯಲ್ಲಿನ ವಿಷಯಗಳು
ಮೆಡಿಕಲ್ ಕಾಲೇಜು
ಮೆಣಸಿನ ಕ್ರಯದ ಸುಂಕ
ಮೇಲುಜಾತಿ
ಮೇಷ್ಟ್ರು
ಮೈಸೂರು ರಾಜ್ಯದ ವರ್ಗಾವಣೆ
ಮೈಸೂರು ಸರಕಾರದಿಂದ ರೈಲು
ಮೈಸೂರು ಸ್ಟೇಟ್ ಕಾಂಗ್ರೆಸ್
ಮೌಖಿಕ ಮತ್ತು ಲಿಖಿತರೂಪ
ಮೌಖಿಕ ಸಂಪ್ರದಾಯ ಮತ್ತು ಮುದ್ರಣ
ಮೌಲ್ಯಗಳ ಸಂಘರ್ಷ
ಮೌಲ್ಯ
ಮೌಲ್ಯಗಳು
ಮ್ಯಾಜಿಸ್ಟ್ರೇಟ್ ಮತ್ತು ವಸ್ತುನಿಷ್ಠ ಕಾನೂನು
ಮ್ಲೇಚ್ಛರು
ಯಜಮಾನಿಕೆ
ಯಜಮಾನಿಕೆಯ ಹೊಸ ಭಾಷೆ
ಯಾವುದು ವೈಜ್ಞಾನಿಕ?
ಯುದ್ಧನೀತಿ
ಯುರೋಪಿನ ನಂಬಿಕೆ
ಯುರೋಪಿನ ಪಠ್ಯಗಳ ಪುನರ್ ರಚನೆ
ಯುರೋಪಿನ ಫ್ಯೂಡಲ್ ಸಂಸ್ಥೆ
ಯುರೋಪಿಯನ್ ಮನೋಸ್ಥಿತಿ
ಯುರೋಪ್ ಕೇಂದ್ರ
ಯುರೋಪ್ ಚಿಂತನೆಯ ಕ್ರಮ
ಯಂತ್ರ ನಾಗರಿಕತೆ
ರಚನೆ ನಿರಚನೆ ಪುನರ್ ರಚನೆ
ರಾಜಕೀಯ ಆಯ್ಕೆ
ರಾಜಕೀಯ ಏಕತೆ ಮತ್ತು ಹೊಸ ನೈತಿಕತೆ
ರಾಜಕೀಯ ಜನಾಂಗ
ರಾಜದ್ರೋಹ
ರಾಜಭಕ್ತಿ
ರಾಜ್ಯಾಂಗ ಪದ್ಧತಿ ಮತ್ತು ಕರ
ರಾಣಿ ಸರ್ಕಾರದ ಠಪ್ಪಾಪೋಟ್ ಹುಕುಂ

ರಾಮರಾಜ್ಯ
ರಾಯತ್ ಪದ್ಧತಿ
ರಾಯತ್‌ವಾರಿ
ರಾಷ್ಟ್ರಭಾಷೆ
ರಾಷ್ಟ್ರ ರಚನೆಯ ವಿಧಿ
ರಾಷ್ಟ್ರ ಸಂಪತ್ತು
ರಾಷ್ಟ್ರೀಯತಾವಾದಿ ಪ್ರಜ್ಞೆ
ರಾಷ್ಟ್ರೀಯತೆ ಆರಾಧನೆ
ರಾಷ್ಟ್ರೀಯತೆ ಏಕತೆ
ರಾಷ್ಟ್ರೀಯತೆ ಮತ್ತು ಕಾರ್ಮಿಕರು
ರಾಷ್ಟ್ರೀಯತೆ ಮತ್ತು ಕೀಳರಿಮೆ
ರಾಷ್ಟ್ರೀಯತೆ ಮತ್ತು ಪಶ್ಚಿಮದ ವೈಚಾರಿಕತೆ
ರಾಷ್ಟ್ರೀಯತೆ ಮತ್ತು ಭಾವನಾತ್ಮಯತೆ
ರಾಷ್ಟ್ರೀಯತೆ ಮತ್ತು ವ್ಯಕ್ತಿ
ರಾಷ್ಟ್ರೀಯತೆ ಮತ್ತು ಸಮಾನತೆ
ರಾಷ್ಟ್ರೀಯತೆಯ ಆದರ್ಶವಾದ
ರಾಷ್ಟ್ರೀಯತೆಯ ಕಲಿಕೆ
ರಾಷ್ಟ್ರೀಯತೆಯ ಪರಿಣಾಮಗಳು
ರಾಷ್ಟ್ರೀಯತೆಯ ವ್ಯಂಗ್ಯ
ರಾಷ್ಟ್ರೀಯತೆಯ ವ್ಯಾಖ್ಯಾನಗಳು
ರಾಷ್ಟ್ರೀಯ ವರಮಾನ
ರಾಷ್ಟ್ರೀಯವಾದ ಮತ್ತು ಜಾತಿ
ರಾಷ್ಟ್ರೀಯ ಶಿಕ್ಷಣ
ರಾಷ್ಟ್ರೀಯ ಸಂಸ್ಕೃತಿ
ರಾಷ್ಟ್ರೀಯ ಸಂಸ್ಕೃತಿ
ರಾಷ್ಟ್ರೀಯ ಹೋರಾಟ ಮತ್ತು ಕೆಳವರ್ಗ
ರುಜುನಿಶಿ ಸರ್ಟಿಫಿಕೇಟ್
ರೆವಿನ್ಯೂ ಇನ್ಸ್‌ಪೆಕ್ಟರ್
ರೈತರ ಕುರಿತು ಗಾಂಧಿ
ರೈತರ ಕುರಿತು ಮನ್ರೋ
ರೈತರ ಕೂಟ
ರೈತರು ಮತ್ತು ರಾಜ್ಯದ ಘರ್ಷಣೆ
ರೈತ ಹೋರಾಟ ಮತ್ತು ಮೈಸೂರು ಸಂಸ್ಥಾನ
ರೈತ್ವಾರಿ ಪದ್ಧತಿ
ರೈಲು
ರೈಲ್ವೆ ಹಾದಿಯ ಸರ್ವೆ
ರೊಮ್ಯಾಂಟಿಕ್‌ರ ಕೈಗಾರಿಕೆ
ರೋಗಗ್ರಸ್ತ ನಾಗರಿಕತೆ
ರೌಲಟ್ ಆ್ಯಕ್ಟ್ ಸತ್ಯಾಗ್ರಹ ಪ್ರತಿಜ್ಞೆ 1919
ಲಾಂಕಶೈರ್ ಬಟ್ಟೆ
ಲಾ ಆಫ್ ಆರ್ಡರ್
ಲಾರಿ
ಲಾರ್ಡ್‌ಗಳು
ಲಾವಣಿಗಳ ಮರುಸೃಷ್ಟಿ
ಲಿಲಾವು
ಲೀ ಸಮಿತಿ
ಲೋಕೋಪಯೋಗಿ ಇಲಾಖೆ
ವರದಿಯ ಸಮಸ್ಯೆ
ವರ್ಣ ಸಿದ್ಧಾಂತ
ವರ್ಷಾಂತ ಪರೀಕ್ಷೆ
ವಸಾಹತು ಆಢಳಿತ ಮತ್ತು ಕನ್ನಡದಲ್ಲಿ
ವಸಾಹತು ಕಚೇರಿಗಳು
ವಸಾಹತು ಕಾಲದ ಕರ್ನಾಟಕದ ಶಿಕ್ಷಣ
ವಸಾಹತು ಕಾಲದ ಧಾರ್ಮಿಕ ವ್ಯಾಖ್ಯಾನಗಳು
ವಸಾಹತು ಕೈಗಾರಿಕೆ
ವಸಾಹತು ನೀತಿ ನಿಯಮಗಳು
ವಸಾಹತು ಪೂರ್ವದ ಶಿಕ್ಷಣ
ವಸಾಹತುಶಾಹಿ ದೇಸಿ ಸಂಸ್ಕೃತಿ
ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಾಮಾನ್ಯರು

ವಸಾಹತುಶಾಹಿ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿ
ವಸ್ತುನಿಷ್ಠ
ವಸ್ತುನಿಷ್ಠ ವಿಜ್ಞಾನ
ವಾದ ಪ್ರತಿವಾದ
ವಾಸ್ತವ ವಾದ
ವಿಕಾಸ ವಾದ
ವಿಜ್ಞಾನ
ವಿಜ್ಞಾನದ ಪರಿಭಾಷೆಗಳು
ವಿದ್ಯಾಭ್ಯಾಸ
ವಿದ್ರೋಹದ ಪರಿಭಾಷೆಗಳು
ವಿನಿಮಯ ಮೌಲ್ಯಗಳು
ವಿಮರ್ಶಾತ್ಮಕ ಓದು
ವಿಶಿಷ್ಟ ಜ್ಞಾನದ ಪ್ರಶ್ನೆ
ವಿಶ್ವಾತ್ಮಕ ಮಾನವತಾವಾದ
ವಿಶ್ವಾತ್ಮಕ ಮೌಲ್ಯ
ವಿಷಯನಿಷ್ಟ ಆಯ್ಕೆ
ವಿಷಯನಿಷ್ಠ ಅಧಿಕಾರ
ವೆಸ್ಟೆಡ್ ಇಂಟ್ರೆಸ್ಟ್
ವೈಜ್ಞಾನಿಕ ಪರಿಭಾಷೆಗಳು
ವೈಸರಾಯ್‌ಗಳು
ವೈಸರಾಯ್ ಮತ್ತು ಗವರ್ನರ್ ಜನರಲ್
ವ್ಯಕ್ತಿ ಅನನ್ಯತೆ
ವ್ಯಕ್ತಿತ್ವವಿಕಾಸ
ವ್ಯಕ್ತಿ ಮತ್ತು ಅಸಹಕಾರತತ್ವ
ವ್ಯಕ್ತಿ ಮತ್ತು ಸಮೂಹ
ವ್ಯಕ್ತಿ ಮತ್ತು ಸ್ವಯಂ ಆಯ್ಕೆ
ವ್ಯಕ್ತಿ ವಾದ
ವ್ಯಕ್ತಿ ವಿಶೇಷ
ವ್ಯಕ್ತಿ ಸ್ವಾತಂತ್ರ್ಯ
ವ್ಯುಡ್ ವರದಿ
ವ್ಯಾಪಾರ ತೆರಿಗೆ
ಶಾಲೆ
ಶಾಲೆ ಮತ್ತು ಕೃಷಿ
ಶಾಸನ ಮಿತಿ
ಶಾಸ್ತ್ರಗಳ ಬೇರೆ ರೀತಿಯ ನಿರ್ವಹಣೆ
ಶಾಸ್ತ್ರಗಳು
ಶಾಸ್ತ್ರಿ ಮತ್ತು ಉಲೇಮಗಳು
ಶಿಕ್ಷಣ ಅಂಬೇಡ್ಕರ್ ನಿಲುವು
ಶಿಕ್ಷಣ ಮತ್ತು ಉದ್ಯೋಗ
ಶಿಕ್ಷಣಮತ್ತು ಪ್ರಭುತ್ವ
ಶಿಕ್ಷಣಮತ್ತುವ್ಯಕ್ತಿ
ಶಿಕ್ಷಣ ಮಿತ ದೃಷ್ಟಿ
ಶಿಕ್ಷಣ ರಾಷ್ಟ್ರೀಯತೆ
ಶಿಕ್ಷಣ ರಾಷ್ಟ್ರೀಯತೆಯ ನಿಲುವು
ಶಿಕ್ಷಣ ಲಿಂಗ ಸಂಬಂಧಿ ನಿಲುವುಗಳು
ಶಿವಪುರ ಸತ್ಯಾಗ್ರಹ
ಶಿಸ್ತು
ಶೈಕ್ಷಣಿಕ ಪ್ರಾಂತ್ಯಗಳು
ಶೈಕ್ಷಣಿಕ ಸಿದ್ಧಾಂತ
ಸಂಕಥನ ಪರಿಭಾಷೆ
ಸಂಕರ ಜ್ಞಾನ
ಸಂಕರ ಜ್ಞಾನ
ಸಂಕರತನ
ಸಂಕರತೆ ಮತ್ತು ಬುಡಕಟ್ಟು ಸಂಸ್ಕೃತಿ
ಸಂಕೇತಶಾಸ್ತ್ರ
ಸಂಬಳ
ಸಂವಾದ
ಸಂವಾದಿಯಾದ ಅಧಿಕಾರಗಳು
ಸಂಸ್ಕೃತಿ ಮತ್ತು ಶಿಕ್ಷಣಶಾಸ್ತ್ರ ಭಾಗದ ಸಮಸ್ಯೆ
ಸಂಸ್ಕೃತೀಕರಣ

ಸತ್ಯಾಗ್ರಹ
ಸದರ್ನ್ಮರಾಠ
ಸನಾತನ
ಸನಾತನೆಯ ಮರು ವ್ಯಾಖ್ಯಾನ
ಸನ್ನಿಧಾನಕ್ಕೆ ಮಾಡುವ ಅರಿಕೆ
ಸಬ್ಆಲ್ಟರ್ನ್
ಸಮಾಜಶಾಸ್ತ್ರೀಯ ವಿವರಣೆ
ಸಮಾನತೆ
ಸಮಾನತೆ ಮತ್ತು ಸ್ವಾತಂತ್ರ್ಯ
ಸರಕಾರಿಕ್ಕರಿಕುಲಂ
ಸವಿನಯ ಭಂಗ
ಸಹಗಮನ ಪದ್ಧತಿಯ ನಿಷೇಧ
ಸಹಯೋಗ ಮತ್ತು ಸ್ಪರ್ಧೆ
ಸಹಾಯಕ ಸೈನ್ಯ ಪದ್ಧತಿ
ಸಾಂಸ್ಕೃತಿಕ ಆಗಮನ
ಸಾಂಸ್ಕೃತಿಕ ಏಕಾಂಗಿತನ
ಸಾಂಸ್ಕೃತಿಕ ಏಕಾಂತವಾದ
ಸಾಂಸ್ಕೃತಿಕ ಪುನರ್ ನಿರ್ಮಾಣ
ಸಾಂಸ್ಕೃತಿಕ ಬಹುತ್ವ
ಸಾಂಸ್ಕೃತಿಕ ಮಿಶ್ರಣ
ಸಾಂಸ್ಕೃತಿಕ ಯಜಮಾನಿಕೆಯ ಸಂಕಥನಗಳು
ಸಾಂಸ್ಕೃತಿಕ ವಿನಿಮಯ
ಸಾಂಸ್ಕೃತಿಕ ಸಂಮಿಶ್ರಣ
ಸಾಂಸ್ಕೃತಿಕ ಸಂವಾದ
ಸಾಂಸ್ಥೀಕರಣ ಮತ್ತು ಸಾಹಿತ್ಯ
ಸಾಮಾಜಿಕ ಅಭಿವೃದ್ಧಿ
ಸಾಮಾಜಿಕ ಕೇಡು ಮತ್ತು ವೈಚಾರಿಕತೆ
ಸಾಮಾನ್ಯರ ಅಭಿಪ್ರಾಯ
ಸಾರಸ್ವತ
ಸಾರ್ವಜನಿಕತೆ
ಸಾರ್ವಜನಿಕ ವೈಯಕ್ತಿಕ ಕಾನೂನು ಕಂದಾಯ
ಸಾಹಿತ್ಯದ ಉನ್ನತಕಲಿಕೆ
ಸಾಹಿತ್ಯದ ಮಾದರಿಗಳು
ಸಿರ್ಸಿಯಲ್ಲಿನ ಗಾಡಿ
ಸಿವಿಲ್ ಅಧಿಕಾರಿ
ಸಿವಿಲ್ ಪರೀಕ್ಷೆ
ಸಿವಿಲ್ ಮತ್ತು ಕ್ರಿಮಿನಲ್
ಸೂಪರ್‌ಟಾಕ್ಸ್
ಸೊಸೈಟಿ ಫಾರ್ ದಿ ಈಕ್ವೆಸಿಜನ್
ಸ್ಕೂಲ್‌ಗಳು
ಸ್ಕೂಲ್ಮತ್ತುಧಾರ್ಮಿಕಕೇಂದ್ರ
ಸ್ಟೇಟ್ ಫಾರ್ ಇಂಡಿಯಾ
ಸ್ತ್ರೀ ನಿರ್ವಚನ
ಸ್ತ್ರೀವಿದ್ಯಾಭ್ಯಾಸದಪ್ರಶ್ನೆ
ಸ್ತ್ರೀ ಶಿಕ್ಷಣ
ಸ್ಥಳೀಯ ಭಾಷೆ ಮತ್ತು ಭಾಷಾಂತರ
ಸ್ಥಳೀಯ ಸಂಸ್ಕೃತಿ ಮತ್ತು ನಾಗರಿಕ ಮನೋಸ್ಥಿತಿ
ಸ್ಪರ್ಧೆ
ಸ್ವಚರಿತ್ರೆಯ ಹುಡುಕಾಟ
ಸ್ವಜ್ಞಾನ
ಸ್ವತಂತ್ರ ನ್ಯಾಯಾಂಗದ ಹಕ್ಕು
ಸ್ವಮಾದರಿಯ ಚರಿತ್ರೆ
ಸ್ವಯಂ ಸೇವಕರ ಪ್ರತಿಜ್ಞೆ ಡಿಸೆಂಬರ್ 1921
ಸ್ವರಾಜ್ಯ
ಸ್ವಾತಂತ್ರ್ಯ
ಸ್ವಾಮಿ ಭೃತ್ಯರ ಸಂಬಂಧ
ಸ್ವಾಸ್ಥ್ಯ
ಸ್ವೀಕೃತಿ ಮತ್ತು ನಿರಾಕರಣೆ

ಹಂಟರ್ ಆಯೋಗ
ಹಕ್ಕುಪತ್ರ
ಹಣ
ಹಳೆಯ ಗವರ್ನಿಂಗ್ ಮಾದರಿಗಳು
ಹಿಂದೂ ಕಾನೂನುಗಳ ಕ್ರೋಢೀಕರಣ
ಹಿತ್ತಲುಗಳಿಗೂ ತೆರಿಗೆ
ಹುಜೂರು ಜಮಾಬಂದಿ
ಹೆಜೆಮನಿ
ಹೊಸ ಉದ್ಯೋಗದ ಅಲೆಮಾರಿಗಳು
ಹೊಸ ಪರಿಭಾಷೆಗಳು
ಹೊಸ ಮಾದರಿಯ ಉತ್ಪಾದನೆಗಳು
ಹೊಸ ರೀತಿಯ ಸಂಕಥನಗಳು
ಹೊಸ ಸಾಮಾಜಿಕತೆಯ ಉಗಮ
ಹೋಟೆಲ್ ಉದ್ಯಮ

೧೦

**1882ರ ಶಿಫಾರಸ್ಸು**

1882ರ ಶಿಕ್ಷಣ ಆಯೋಗದ ಶಿಫಾರಸ್ಸು ಮತ್ತು 1904-1913 ಸರ್ಕಾರದ ಶೈಕ್ಷಣಿಕ ನೀತಿಯ ಮುಖ್ಯ ನಿಲುವುಗಳು ಹೀಗಿದ್ದವು:

1. ಅಸ್ಪೃಶ್ಯರಿಗೂ ಶಿಕ್ಷಣ
2. ಬಾಲಕಿಯರಿಗೂ ಶಿಕ್ಷಣ
3. ಸಾಂಪ್ರದಾಯಿಕ ನಿಷೇಧಗಳ ಭೇದವಿಲ್ಲದೆ ಶಿಕ್ಷಣ
4. ಸಾರ್ವಜನಿಕ ನಿಧಿಯಿಂದ ಸ್ಥಾಪಿಸಲ್ಪಟ್ಟ ಅಥವಾ ಸಹಾಯ ಧನ ಪಡೆಯುವ ಶಾಲೆಗಳಿಗೆ ಪ್ರತಿಯೊಬ್ಬ ಮಗುವಿಗೆ ಪ್ರವೇಶದ ಹಕ್ಕು
5. ಕೆಳಸ್ತರದವರಿಗೆ ಶಿಕ್ಷಣದ ಹಕ್ಕು
6. ಶಿಕ್ಷಣ ಪಡೆದವರಿಗೆ ಸರಕಾರಿ ಹುದ್ದೆ
7. ವಯಸ್ಕ ಶಿಕ್ಷಣ
8. ಸಾಮಾಜಿಕ ಮತ್ತು ಮತೀಯ ಶಿಕ್ಷಣದಲ್ಲಿ ಹಸ್ತಕ್ಷೇಪ ಮಾಡದಿರುವುದು.

ಬ್ರಿಟೀಷರ ಹೊಸ ಶಿಕ್ಷಣವು ಉದಾರವಾಗಿತ್ತು. ಖಾಸಗಿ ಸಂಸ್ಥೆಗಳು ಖಾಸಗಿ ಶಾಲೆಗಳನ್ನು ಪ್ರಾರಂಭಿಸಿದವು. ಕ್ರಮಬದ್ಧ ಶಿಕ್ಷಣ ಕ್ರಮ ಪ್ರಾರಂಭವಾಯಿತು. 1881ರಲ್ಲಿ ಭಾರತದ ದಾದಾಬಾಯಿ ನವರೋಜಿಯವರು ಎಲ್ಲಾ ಮಕ್ಕಳಿಗೂ ನಾಲ್ಕು ವರ್ಷದ ಶಿಕ್ಷಣ ಕೊಡಬೇಕೆಂದು ಪ್ರತಿಪಾದಿಸಿದರು. 1918-1931ರ ಅವಧಿಯಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಕಾನೂನು ಅಂಗೀಕಾರವಾಯಿತು

ವಿವರಗಳಿಗೆ ನೋಡಿ : ಜೆ.ಪಿ. ಪಟ್ನಾಯಕ್, 1986, ಭಾರತೀಯ ಶಿಕ್ಷಣದಲ್ಲಿ ಸಮತೆ, ಗುಣ ಮತ್ತು ಪರಿಣಾಮ ಪು. 10

**1919ರ ವಿಧಿ**

19--19ನೆ ಇಸವಿಯ ವಿಧಿಯಲ್ಲಿ ಆಡಳಿತದ ವಿಷಯಗಳನ್ನು ಎರಡು ಭಾಗವಾಗಿ ಮಾಡಿದೆ. ಆ ವಿಭಾಗದಲ್ಲಿ ಸೆಂಟ್ರಲ್ ವಿಷಯಗಳು ಅಥವಾ ಅಖಿಲ ಭಾರತ ರಾಷ್ಟ್ರದ ಕರ್ತವ್ಯಗಳು ಕ್ರೋಢೀಕೃತವಾಗಿವೆ. ಅವುಗಳಲ್ಲಿ ಮುಖ್ಯವಾದವು ಮಾತ್ರ ಇವು :

1. ರಕ್ಷಣೆ ಅಂದರೆ ಭೂ ಸೈನ್ಯ, ಜಲ ಸೈನ್ಯ, ಆಕಾಶ ಸೈನ್ಯಗಳ ಆಡಳಿತ.
2. ಅನ್ಯದೇಶ ಸಂಬಂಧ ವ್ಯವಹಾರಗಳು.
3. ದೇಶೀಯ ಸಂಸ್ಥಾನಗಳ ಮೇಲ್ವಿಚಾರಣೆ.
4. ಸಂಚಾರ ಸೌಕರ್ಯಗಳು ಅಂದರೆ ರೈಲು, ಕಾಲುವೆ ಮತ್ತು ಆಕಾಶಮಾರ್ಗ ಸಾಧನೆಗಳು.
5. ನೌಕಾಶ್ರಯಗಳು, ಹಡಗುಗಳ ಸಂಚಾರ, ದೀಪಗೃಹ, ಸಮುದ್ರಯಾನ ಸಂಬಂಧವಾದ ಆಡಳಿತ.
6. ಟಪಾಲ್, ತಂತಿ, ಟೆಲಿಫೋನ್ ಮತ್ತು ವೈರ್ಲೆಸ್ ಶಾಖೆಗಳು.
7. ಸುಂಕದ ಶಿಸ್ತು.
8. ನಾಣ್ಯದ ಶಿಸ್ತು, ಟಂಕಸಾಲೆ ಮುಂತಾದವು.
9. ರಾಷ್ಟ್ರೀಯ ಋಣದ ವ್ಯವಹಾರ.
10. ಸಿವಿಲ್ ಲಾ ಅಥವಾ ಮಮತ್ವ ಸಂಬಂಧವಾದ ನ್ಯಾಯವಿಧಿ.
11. ವ್ಯಾಪಾರ, ಲೇವಾದೇವಿ, ಬ್ಯಾಂಕುಗಳು, ಇನ್‌ಷ್ಯೂರೆನ್ಸ್ (ವಿಮೆ).
12. ರಾಷ್ಟ್ರಗ್ರಸ್ತವೆನಿಸಿದ ವ್ಯಾಪಾರ ಅಫೀಂ, ಉಪ್ಪು, ಪೆಟ್ರೋಲಿಯಂ, ಮದ್ದಿನ ವಸ್ತುಗಳು.
13. ಉದ್ಯೋಗ ವೃದ್ಧಿ.
14. ಉಗ್ರಾಣ ಮತ್ತು ಲೇಖನ ಸಾಮಗ್ರಿಗಳ ವ್ಯಾಪಾರ.
15. ಶಾಸ್ತ್ರೀಯ ಪರೀಕ್ಷಾ ಶೋಧನೆಗಳು : ಭೂಶೋಧನೆ, ಸಸ್ಯರಾಶಿ ಪರೀಕ್ಷೆ, ಪ್ರಾಣಿವರ್ಗ ಪರೀಕ್ಷೆ, ಪ್ರಾಕ್ತನ ಪರೀಕ್ಷೆ, ಭೂಮಿಯ ಸರ್ವೆ, ಜನಗಣತಿ, ಅಂತರಿಕ್ಷ ಪರೀಕ್ಷೆ, ಮುಂತಾದವು.
16. ದೇಶಾಂತರ ಗಮನ ಮತ್ತು ವಿದೇಶೀಯರ ಪ್ರವೇಶ.
17. ಬಿರುದು ಮರ್ಯಾದೆಗಳು.
18. ಕ್ಷೇತ್ರ ವಿಭಾಗ ಇತ್ಯಾದಿ.

ಇವುಗಳೆಲ್ಲವೂ ವಿಸ್ತಾರವಾದ ಕಾರ್ಯರಾಶಿಯನ್ನೇ ಸೂಚಿಸುತ್ತವೆ. ಈ ಕಾರ್ಯಸೂಚಿಗಳು ಬ್ರಿಟೀಶ್ ಪ್ರಭುತ್ವದ ಹಿಂದಿರುವ ರಾಜಕೀಯ ಪರಿಭಾಷೆಗಳೂ ಹೌದು.

**1942 ರ ಶಿವಮೊಗ್ಗ**

1942ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ ಶಿವಮೊಗ್ಗ ಜಿಲ್ಲಾ ವರದಿಯಲ್ಲಿ ಹೀಗೆ ದಾಖಲಾಗಿದೆ: (ಕೆ. ಶಂಕರಪ್ಪ, ಡಿ.ಡಿ. ಶಂಕರನಾರಾಯಣ ರಾವ್).

ನಡೆದ ಕಾರ್ಯಗಳು

1. ನಮ್ಮ ಜಿಲ್ಲಾ ಮುಖಂಡರ ದಸ್ತಗಿರಿಯಾಯಿತು.
2. ಕಾಂಗ್ರೆಸ್ ಕೆಲಸಗಾರರು ತುರಂಗವನ್ನು ಸೇರಿದರು.
3. ವಿದ್ಯಾರ್ಥಿಗಳು ಶಾಲೆಗಳನ್ನು ಬಹಿಷ್ಕರಿಸಿ, ಕಾಂಗ್ರೆಸ್ ಅಹಿಂಸಾ ಮಾರ್ಗದಲ್ಲಿ ತುರಂಗವನ್ನು ಸೇರಲು ಸಿದ್ದರಿದ್ದರು. ಆದರೆ ಈ ವಾನರ ಸೈನ್ಯವನ್ನು ದಸ್ತಗಿರಿ ಮಾಡಲು ಹೆದರಿ, ಅವರು ಏನು ಮಾಡಿದರೂ ಸುಮ್ಮನಿದ್ದರು. ಪ್ರಭಾತ್‌ಫೇರಿಗಳು, ಬಹಿರಂಗಸಭೆಗಳು, ಖಂಡನಾ ಸಭೆಗಳು, ನಿಧಿ ಸಂಗ್ರಹ ಕಾರ್ಯ ಮೊದಲಾದ ಕೆಲಸಗಳನ್ನು ಮುಂದುವರಿಸಿ ಕಾಂಗ್ರೆಸ್ಸನ್ನು ಬಲಪಡಿಸಿದರು.
4. ಕೂಲಿಕಾರರು ಕಾರ್ಖಾನೆಗಳನ್ನು ಮುಚ್ಚಿಸಿದರು. ಅನೇಕರು ಸರ್ಕಾರದ ಕಾನೂನುಗಳಿಗೆ ಸಿಕ್ಕರು. ತುರಂಗವನ್ನು ಸೇರಿದರು. ಅಹಿಂಸಾ ಮಾರ್ಗದಲ್ಲಿಯೇ ಮುಂದುವರಿದು ಸರ್ಕಾರದ ದಬ್ಬಾಳಿಕೆಯನ್ನು ಅನೀತಿಯನ್ನು ಎದುರಿಸಿದರು.
5. ಸಂತೆಗಳಲ್ಲಿ ಸುಂಕ ಕೊಡಬಾರದೆಂದು ಪ್ರಚಾರವೂ ನಡೆದು ಅಲ್ಲಲ್ಲೇ ಕೆಲವು ಕಡೆ ಸುಂಕ ಕೊಡುವುದು ನಿಂತಿತ್ತು.
6. ಅನೇಕ ಹೆಂಡದ ಅಂಗಡಿಗಳ ಪಿಕೆಟಿಂಗ್ ನಡೆಯಿತು.– ಇದು ಮದ್ಯಪಾನ ನಿಷೇಧವನ್ನು ಸೂಚಿಸುತ್ತದೆ.
7. ಈಚಲ ಮರಗಳನ್ನು ಪಿಪಾಯಿಗಳನ್ನು ಒಡೆದರು.
8. ಅಧಿಕಾರಿಗಳ ವಾಹನ ಸೌಕರ್ಯಗಳನ್ನು ಅಹಿಂಸಾತ್ಮಕವಾಗಿಯೇ ಕೆಡಿಸಿ ಅಡ್ಡಿಪಡಿಸಿದರು. ಟೆಲಿಗ್ರಾಂ, ವೈರ್, ಟೆಲಿಫೋನ್ ಸೇತುವೆ ವಗೈರೆ.

9. ಬುಲೇಟಿನ್‌ಗಳನ್ನು ಬರೆದು ಪತ್ರಿಕೆಗಳಲ್ಲಿ ಬಾರದ ವಿಚಾರಗಳನ್ನು ಪ್ರಕಟಿಸಿ ಜನರಿಗೆ ತಿಳಿಸುತ್ತಿದ್ದರು. ಇವು ಸಂಪರ್ಕದ ಮೇಲಿನ ಹಿಡಿತ.

10. ಜಿಲ್ಲೆಯಲ್ಲಿ ಯಾರನ್ನು ದಸ್ತಗಿರಿ ಮಾಡಲು ಹೋದರೂ, ಕೆಚ್ಚೆದೆಯಿಂದ ಅಧಿಕಾರಿಗಳ ವಶ ಆಗುತ್ತಿದ್ದರು. ತುರಂಗಗಳು ಭರ್ತಿಯಾದವು. ಸ್ಥಳವಿಲ್ಲದಾಗಿ ಸಂಸ್ಥಾನದ ಯಾವ ತುರಂಗದಲ್ಲಿ ನೋಡಿದರೂ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಹಿತೈಷಿಗಳು, ವಿದ್ಯಾರ್ಥಿಗಳೂ, ಕೂಲಿಕಾರರು ಇದ್ದರು. ನಮ್ಮ ಜಿಲ್ಲೆಯ ಜನರು ತುರಂಗವನ್ನು ಸೇರಲು ಹೆದರದೇ ಇರುವುದನ್ನು ಕಂಡು ದಸ್ತಗಿರಿಗಳೇ ನಿಂತವು.

11. ಸರ್ಕಾರದ ದಬ್ಬಾಳಿಕೆಯನ್ನು ಬಹಿರಂಗವಾಗಿ ಎದುರಿಸಲಾಯಿತು. ಮೈಸೂರು ಕಾಂಗ್ರೆಸ್‌ನವರಾಗಲೀ, ಮಹಾತ್ಮಾಜಿಯವರಾಗಲೀ ನಿರ್ದಿಷ್ಟ ಕಾರ್ಯಕ್ರಮಗಳನ್ನು ತಿಳಿಸಿದರೆ ನಮ್ಮ ಜಿಲ್ಲೆಯು ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಂಡು ನಡೆಸಲು ಸಿದ್ಧವಿದ್ದಿತು.

12. ಕೆಲವು ಕೆಲಸಗಾರರು ಒಂದು ವರ್ಷ ಕಾಲ ಅಧಿಕಾರಿಗಳಿಗೆ ಕಾಣಿಸಿಕೊಳ್ಳದೆ ಕಾಂಗ್ರೆಸ್ ಧ್ಯೇಯಗಳಿಗನುಸಾರವಾಗಿ ದುಡಿದು ತುರಂಗವನ್ನು ಸೇರಿದರು. ಇದು ಕಾಂಗ್ರೆಸ್ ಕಾರ್ಯಸ್ರಚಿಯಾಗಿದೆ.

13. ಈಸೂರು ಮೊಕದ್ದಮೆಯನ್ನು ಸಾಗರ ಕೋರ್ಟು, ಶಿವಮೊಗ್ಗ ಕೋರ್ಟು ಮತ್ತು ಎರಡು ಬಾರಿ ಹೈಕೋರ್ಟುಗಳಲ್ಲಿ ವಿಚಾರಣೆಗಳನ್ನು ನಡೆಸುವ ಬಗ್ಗೆ ಸಾರ್ವಜನಿಕರಿಂದ ನಿಧಿ ಸಂಗ್ರಹಿಸಿ ಕೆಲಸ ಮಾಡಿದರು.

14. ಭದ್ರಾವತಿಯಲ್ಲಿ ಕೆಲವು ಸಂಸಾರಿಗಳಿಗೆ ಸಹಾಯ ಒದಗಿಸಲಾಯಿತು. ಇವುಗಳು ಆಗಿನ ಕಾಂಗ್ರೆಸ್ ಕಾರ್ಯಸೂಚಿಗಳೂ ಆಗಿದ್ದವು.

**ಅಚಾರಿತ್ರಿಕತೆ**

ಕೈಗಾರಿಕೀಕರಣದ ಸಂದರ್ಭದಲ್ಲಿ ರೂಪುಗೊಂಡ ವೈಚಾರಿಕತೆಗೆ ಮಧ್ಯ ಯುಗೀನ ಕಾಲದ ಯುರೋಪಿನ ಚಿಂತನಾ ಕ್ರಮದ ಪ್ರಭಾವವಿದೆ. ಸೈದ್ ಆಧುನಿಕ ಪ್ರಭುತ್ವ ಮತ್ತು ಅದರ ಯುರೋಪ್ ಕೇಂದ್ರಿತ ಚಿಂತನೆ ಎರಡನ್ನು ಕುರಿತು ಮಾತನಾಡುತ್ತಾನೆ. ಸೈದ್ ವಸಾಹತು ಶಾಹಿ ಜಗತ್ತನ್ನು ಅಚಾರಿತ್ರಿಕವೆಂದು ಕರೆಯುವುದಿಲ್ಲ. ಸೈದ್ ನ ಈ ವಾದವು ಗಮನಾರ್ಹ. ಅಚಾರಿತ್ರಿಕ ಮತ್ತು ಚಾರಿತ್ರಿಕ ಎಂಬ ವಿಷಯಗಳ ನಡುವೆ ಇರುವ ದ್ವಂದ್ವಾತ್ಮಕ ದೃಷ್ಟಿಯನ್ನು ಗಮನಿಸಬೇಕು.

**ಅಚ್ಚಿನ ಮೊಳೆ**

ಮೂವರು ವೈದಿಕರು ಕನ್ನಡ ಭಾಷಾಭ್ಯಾಸದಲ್ಲೇ ನಿರತರಾಗುವಂತೆ ನೇಮಿಸಿ (1853) ಅಚ್ಚಿನ ಮೊಳೆಗಳನ್ನು ಬಾಸೆಲ್‌ನಲ್ಲಿ ಸಿದ್ಧಪಡಿಸಿದರು. ಭಾರತ, ಬಸವ ಪುರಾಣ, ದಾಸರ ಪದಗಳು, ರಾಮಾಯಣಗಳು 1850ರಲ್ಲಿ ಅಚ್ಚಾದವು. (ಎಂ.ಎಸ್. ಕಾಮತ್ 1995 ಪುಟ.404)

ಮಿ. ಬ್ಲೇರ್ ದೊರೆಗಳ ಕಾಲದಲ್ಲಿ (1842 ಮೇ) ವೈದಿಕ ಬೋಧನಾಲಯವನ್ನು ಮುದ್ರಣಾಲಯವನ್ನು ಸ್ಥಾಪಿಸಲಾಯಿತು.

1842ರಲ್ಲಿ 'ಮಂಗಳೂರು ಸಮಾಚಾರ' ಪತ್ರಿಕೆಯು ಪ್ರಾರಂಭವಾಯಿತು. ಅದಕ್ಕಿಂತ ಮೊದಲು ಬಳ್ಳಾರಿಯಲ್ಲಿ 'ಕನ್ನಡ ಸಮಾಚಾರ' ಪ್ರಾರಂಭವಾಗಿತ್ತು. ಶಾಲಾ ಪಠ್ಯ ಪುಸ್ತಕಗಳು ರಚಿತವಾದವು : ಅಕ್ಷರ ಮಾಲೆ (1844), ಭೂಗೋಳ (1845), ಗಾದೆಗಳು, ಬಾಲಶಿಕ್ಷೆ, ಸಾಲೆ ಪುಸ್ತಕಗಳು (1847), ನೀತಿ ಪಾಠಗಳು (1848), ಮೂರನೆಯ ಪುಸ್ತಕ (1849), ವಾಚನ ಪುಸ್ತಕಗಳು (1851), ಅಕ್ಷರ ಮಾಲೆ (1853).

1853ರಲ್ಲಿ ಸೈನಿಕರು ಇಲ್ಲಿದ್ದುದರಿಂದ ಪೈಮಾಯಿಸಿಯ ಪುಸ್ತಕಗಳು, ಪಠೇಲರ ಕಾರ್ಯಕ್ರಮಗಳು, ಸಿವಿಲ್ ವ್ಯವಹಾರಗಳ ಲೆಕ್ಕ ನಮೂನೆಗಳು, ಸರಕಾರದ ಆಕ್ಟುಗಳು, ಹಿಂದೂ-ಲಾ ಮುದ್ರಣಗೊಂಡವು. ಮಂಗಳೂರು ಪಂಚಾಂಗ 1854ರಲ್ಲಿ ಪ್ರಕಟವಾಯಿತು. ಕನ್ನಡ ವಾರ್ತಿಕ ಪತ್ರಿಕೆಯು 1857 ಪಕ್ಷ ಪತ್ರಿಕೆಯು ಪ್ರಾರಂಭವಾಯಿತು. ಕ್ರಿಶ್ಚಿಯನ್ ಧರ್ಮ ಗ್ರಂಥಗಳನ್ನು ಆರು ಭಾಷೆಗಳಲ್ಲಿ ಪ್ರಕಟಿಸಲಾಯಿತು.

ಮಿಶನರಿ ಪುಸ್ತಕಗಳನ್ನು ಮನೆಮನೆಗೆ ಕೊಂಡೊಯ್ದು ಮಾರಲು ಪ್ರಾರಂಭಿಸಿದರು (1857).

ಒಂದಾಣೆಯ ಕನ್ನಡ ಬಾಲಶಿಕ್ಷೆ, ನಾಲ್ಕಾಣೆಯ ಗಣಿತ ಪುಸ್ತಕ, ಕನ್ನಡದ ಸ್ಪೆಲ್ಲಿಂಗ್ ಪುಸ್ತಕ, ಬಡ್ಡಿಯ ಜಂತ್ರಿಯೂ, ಹಿಂದೂ ದೇಶದ ನಕ್ಷೆ, ಭೂತಾಳ ಪಾಂಡ್ಯನ ಅಳಿಯಕಟ್ಟು, ವೀರ ರಾಜೇಂದ್ರನಾಮೆ, ಪಂಚಾಂಗ, ಕನ್ನಡ ವಾರ್ತಿಕ (ಚಿತ್ರ ಸಹಿತ) (1858 ಮತ್ತು 1857)ರಲ್ಲಿ ಪ್ರಕಟಗೊಂಡವು. ಇವು ಮುದ್ರಣ ತಂತ್ರಜ್ಞಾನದ ಪ್ರವೇಶವನ್ನು ಸೂಚಿಸುತ್ತವೆ.

**ಅಧಾರ್ಮಿಕತೆಯ ಪ್ರಶ್ನೆ**

ಇಂಗ್ಲೀಷ್ ಮಾದರಿಯ ಶಿಕ್ಷಣ ಕ್ರಮದಿಂದ ಬರವಣಿಗೆಯ ಕ್ರಮದಲ್ಲಿದ್ದ ಧಾರ್ಮಿಕ ಅರ್ಥವಂತಿಕೆಯು ಹೊರಟು ಹೋಯಿತು. ಹೊಸ ರೀತಿಯ

ಸಂಕಥನಗಳು ಹುಟ್ಟಿಕೊಂಡವು. ಈ ಕುರಿತ ಚರ್ಚೆಗಳು ಆಗಿನ ಬೌದ್ಧಿಕ ವಾಗ್ವಾದದ ಸೂಚನೆಯೂ ಹೌದು. ಬ್ರಿಟೀಷ್ ಕಾಲದ ಭಾರತೀಯ ಶಿಕ್ಷಣ ಪದ್ಧತಿಯ ಕುರಿತು ಹೇಳುವಾಗ ಗೌರಿವಿಶ್ವನಾಥನ್ ಅವರು ಪ್ರತಿಪಾದಿಸುವ ಎರಡು ಅಂಶಗಳು ಇಲ್ಲಿ ಗಮನಾರ್ಹ (1989, ಪು. 3 ಮತ್ತು 8). ಆ ಕಾಲದ ಶಿಕ್ಷಣಕ್ಕೆ ನಿರ್ದಿಷ್ಟ ಮಾನವತೆಯ ಪ್ರಶ್ನೆಗಳು ಮುಖ್ಯವಾಗಿದ್ದವು. ಎರಡನೆಯದಾಗಿ ವಸಾಹತು ಕಾಲದ ಶಿಕ್ಷಣವು ಅಧಾರ್ಮಿಕ ರೂಪದ್ದಾಗಿತ್ತು **(Non-Religious Theory of Education)**. ಆಗಿನ ಚಿಂತಕರು ಸ್ತ್ರೀಯರ ಶಿಕ್ಷಣದ ಕುರಿತು ಮಾತಾಡುವಾಗ – ಸ್ತ್ರೀಯರಿಗೆ ಶಿಕ್ಷಣ ಅಗತ್ಯವೆಂದೂ ಅದರಿಂದ ದೇಶದ ಉದ್ಧಾರ ಸಾಧ್ಯವೆಂದೂ ಪ್ರತಿಪಾದಿಸುತ್ತಾರೆ. ಶಿಕ್ಷಣದ ಬಗ್ಗೆ ಉದಾರವಾದಿ ಮಾನವತಾವಾದ ಚಿಂತಿಸುವ ಕ್ರಮವು ಈ ಬಗೆಯದು. ಎರಡನೆಯದಾಗಿ ಆ ಸಂದರ್ಭದ ಅನೇಕರು ಅದನ್ನು ಮಾನವೀಯತೆಯ ಪ್ರಮುಖ ಅಂಶವೆಂಬಂತೆ ಪರಿಗಣಿಸುತ್ತಾರೆ. ಇದು ಮೂಲತಃ ಆದರ್ಶವಾದಿ ನಿಲುವಿನಿಂದ ಹುಟ್ಟಿರುವಂಥದ್ದು.

**ಅಧಿಕಾರದ ನಿರೂಪಣೆಗಳು**

ವಸಾಹತು ಕಾಲದಲ್ಲಿ ರಾಜಕೀಯ, ಆರ್ಥಿಕ ವಿಷಯಗಳ ಹೊಸ ರೀತಿಯಲ್ಲಿ ಅಧಿಕಾರವನ್ನು ಮೂಲಕ ವಿವರಿಸಲಾಯಿತು. ಫುಕೋ ಹೇಳುವ ಮೂರು ಅಂಶಗಳನ್ನು ಇಲ್ಲಿ ಗಮನಿಸಬೇಕು :

ಅಧಿಕಾರ (ಪ್ರಭುತ್ವ)ವು ರೂಪುಗೊಳ್ಳುವುದು ಸಾಮಾಜಿಕ ರೂಪಕ್ಕೆ ಅನುಸಾರವಾಗಿ, ಇಲ್ಲಿ "ವಿಷಯ ನಿಷ್ಠತೆ" ಎನ್ನು ವುದು ಮುಖ್ಯ. ಜ್ಞಾನರೂಪಗಳು ತನ್ನಿಂದ ತಾನೇ ಅಧಿಕಾರದ ರೂಪದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಪ್ರಭುತ್ವದ ಅಧಿಕಾರವು ವಿಶ್ವಾಸಾತ್ಮಕವಾದುದು. ಅದು ಆ ರೂಪವನ್ನು ಪಡೆಯುವುದಕ್ಕೆ ಸಾಮಾಜಿಕ ಸಂಬಂಧಗಳ ವ್ಯತ್ಯಯವೇ ಮುಖ್ಯ ಕಾರಣ. ಯಾವಾಗ ಸಾಮಾಜಿಕ ಸಂಬಂಧಗಳಲ್ಲಿ ವಿವಿಧತೆಯು ಹುಟ್ಟಿಕೊಳ್ಳುತ್ತದೆಯೋ ಆಗ ಜ್ಞಾನ ಮತ್ತು ಅಧಿಕಾರಗಳು ಬೇರೆ ಬೇರೆ ರೂಪವನ್ನು ಧರಿಸಬೇಕಾಗುತ್ತದೆ. ಈ ಅರ್ಥದಲ್ಲಿ ಜ್ಞಾನಕ್ಕೂ ಅಧಿಕಾರಕ್ಕೂ ಸಂಬಂಧವಿದೆ.

**ಅಧಿಕಾರದ ಸಂಬಂಧಗಳು**

ಅಧಿಕಾರದ ಸಂಬಂಧಗಳು ವಾಸ್ತವವಾಗಿ ಬೇರೆ ಬೇರೆ ರೀತಿಯಲ್ಲಿವೆ. ಗಂಡ–ಹೆಂಡತಿ; ಗುರು–ಶಿಷ್ಯ; ದೇವರು–ಮನುಷ್ಯ; ರಾಜ–ಪ್ರಜೆ; ಜಮಿನುದಾರ–ಸೇವಕ ಹೀಗೆ. ಅಧಿಕಾರವನ್ನು ನಾವು ಯಜಮಾನಿಕೆಯೆಂದೂ ಕರೆಯುತ್ತೇವೆ. ಭಾರತದಲ್ಲಿ ವಸಾಹತು ಆಡಳಿತವು ಎರಡು ರೀತಿಯ ಅಧಿಕಾರವನ್ನು ಹೊಂದಿತ್ತು. ಸೇನೆ; ಮಿಲಿಟರಿ; ಪೋಲೀಸು; ನ್ಯಾಯಾಧಿಕರಣಗಳ ಮೂಲಕ ಭಾರತೀಯರನ್ನು

ಪತ್ತಿಕ್ಕಿದ್ದು ಭೌತಿಕ ಅಧಿಕಾರ. ಇನ್ನೊಂದು ಬೌದ್ಧಿಕ ಅಧಿಕಾರ. ಅದು ಭಾಷೆ: ಸಂಸ್ಕೃತಿಯ ಮೇಲೆ ಆಕ್ರಮಣ ಮಾಡುತ್ತವೆ. ಗಾಂಧಿ ಅಧಿಕಾರ ಎರಡು ಬಗೆಯದು ಎಂದು ಹೇಳಿರುವುದು ಉಲ್ಲೇಖನೀಯ. ಇನ್ನೊಬ್ಬರನ್ನು ಹಿಂಸಿಸುವುದರ ಮೂಲಕ ಪಡೆದುಕೊಳ್ಳುವ ಅಧಿಕಾರ. ಮತ್ತೊಂದು ಪ್ರೀತಿ ಮೂಲಕ ಮತ್ತೊಬ್ಬರನ್ನು ಗೆಲ್ಲುವುದು. ಗಾಂಧಿಗೆ ಎರಡನೆಯದರ ಬಗ್ಗೆ ಗೌರವವಿತ್ತು.

**ಅಧಿಕಾರದ ಹೊಸ ಪರಿಭಾಷೆ**

ನಾವೀಗ ಅಧಿಕಾರ ಎನ್ನುವುದನ್ನು 'ನೇಶನ್' **'State'** ಎಂಬ ಅರ್ಥದಲ್ಲಿ ಬಳಸುತ್ತಿದ್ದೇವೆ. ಅಧಿಕಾರ ಸಾಮಾಜಿಕ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಸಂಸ್ಥೆಯಿದ್ದರೆ ಅದು ಆಳುತ್ತದೆ ಮತ್ತು ಗುಂಪಿನ ಪರವಾಗಿ ಅಧಿಕೃತ ವಕ್ತಾರರಂತೆ ವಹಿಸುತ್ತದೆ. ಯಜಮಾನ್ಯವೆನ್ನುವುದು ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯ ಪಾತ್ರ ವಹಿಸುವಂತೆಯೇ ಅದರ ಜೊತೆಯಲ್ಲಿ ಅದು ತನ್ನದೇ ನಿಯಮ ಹೊಂದಿರುತ್ತದೆ. ಅಧಿಕಾರವನ್ನು ಯಾರು ಹಿಡಿಯುತ್ತಾರೋ ಅವರ ಚಟುವಟಿಕೆಯು ಒಂದು ವ್ಯವಸ್ಥೆಯನ್ನು ಸಿದ್ಧಪಡಿಸಿಕೊಳ್ಳಲು ಉಳಿದವರನ್ನು **'ಅಧೀನ'** ಎಂಬಂತೆ ನೋಡಿಕೊಳ್ಳುತ್ತಾರೆ. ಅಧಿಕಾರ ಹೊಂದಿದವರಿಗೆ ಕೆಲವು ವಿಶಿಷ್ಟ ಅಂಶಗಳ ಹಕ್ಕುಗಳು ಕೂಡಾ ಇರುತ್ತವೆ. ಅದಕ್ಕೆ ಸಂಬಂಧಿಸಿದಂತೆ ನಿಯಮಗಳು ರೂಪಿಸಲ್ಪಡುತ್ತವೆ. ಆಳುವ ವರ್ಗದ ಲಕ್ಷಣಗಳು ಆಯಾಯ ಸಮಾಜ ಮತ್ತು ಸಂಸ್ಕೃತಿಗೆ ಅನುಸಾರವಾಗಿ ಬೇರೆಯಾಗಬಹುದು. ಎಷ್ಟೋ ಸಂದರ್ಭಗಳಲ್ಲಿ "ಅಧಿಕಾರ" ಪಡೆದುಕೊಳ್ಳುವ ರೀತಿ ರಿವಾಜುಗಳು ಬೇರೆಯಾಗುತ್ತವೆ. ಅದೇ ರೀತಿಯಲ್ಲಿ ಜನಾಂಗದಿಂದ ಜನಾಂಗಕ್ಕೆ ಬೇರೆಯಾಗುತ್ತವೆ. ಆಳುವ ವರ್ಗ ಆಯಾಯ ಸಂದರ್ಭ ಮತ್ತು ಪ್ರದೇಶಗಳಲ್ಲಿ ತಮಗೆ ಬೇಕಾದ ರೀತಿಯಲ್ಲಿ ನಿಯಮ ರೂಪಿಸುತ್ತಾರೆ ಮತ್ತು ಅದಕ್ಕೆ ಬೇಕಾದ ಸ್ಥಾನ ನಿರ್ಣಯಗಳಾಗುತ್ತವೆ. ಉದಾ : ಬೇರೆ ಬೇರೆ ಜಾತಿಯಲ್ಲಿರುವ ಗುರಿಕಾರರು : ಪುರೋಹಿತರು ಇತ್ಯಾದಿ ಮತ್ತು ಹೊಸ ಸಂದರ್ಭದಲ್ಲಿ ಕೋರ್ಟು, ಕಾನೂನು ಇತ್ಯಾದಿ. ಹಳೆಯ ಸಾಮಾಜಿಕ ರಚನೆಯ ಮೌಖಿಕ ಕಾನೂನುಗಳಿಗೂ ವಸಾಹತು ಕಾಲಘಟ್ಟದಲ್ಲಿ ರೂಪುಗೊಂಡ ಕಾನೂನುಗಳಿಗೂ ವ್ಯತ್ಯಾಸವಿದೆ. ವಸಾಹತು ಪೂರ್ವದ ಕಾಲಘಟ್ಟದಲ್ಲಿ ಕಾನೂನು ಮತ್ತು ಶಿಕ್ಷೆ ಎರಡಕ್ಕೂ ಊರೊಳಗೆಯೇ ನ್ಯಾಯ ದೊರಕುತ್ತಿತ್ತು . ಬ್ರಿಟೀಶರ ಕಾಲದಲ್ಲಿ ಅಧಿಕಾರದ ಪರಿಕಲ್ಪನೆಯು ಬದಲಾಯಿತು.

(ನೋಡಿ: 1. Sudipta Kaviraj (Ed) – The Unhappy Consciousness
2. Ranajith Guha – Dominant without hegemony)

## ಅಧಿಕಾರ ಮತ್ತು ಕರ್ತವ್ಯ

ವಸಾಹತು ಸಂದರ್ಭದಲ್ಲಿ ಅಧಿಕಾರವು ಜವಾಬ್ದಾರಿ ಮತ್ತು ಕರ್ತವ್ಯವೆರಡನ್ನು ಹೊರಬೇಕೆಂದು ಪ್ರಭುತ್ವವು ಭಾರತೀಯ ಜನರಿಗೆ ಪ್ರತಿಪಾದಿಸಿತು. ಗಮನಿಸಬೇಕಾದ ಅಂಶವೆಂದರೆ ಭಾರತದ ಆಚರಣೆಗಳಿಗೆ ; ಹಬ್ಬಗಳಿಗೆ ಅದರದ್ದೇ ಅನ್ನಬಹುದಾದ ನೀತಿ ಸಂಹಿತೆಗಳಿವೆ, ವಿಶಿಷ್ಟತೆಗಳಿವೆ, ಐತಿಹ್ಯ, ಪುರಾಣಗಳಿವೆ. ಉದಾ : ಬಲಿಪಾಡ್ಯಮಿ, ಇದು ಬ್ರಿಟೀಶರಿಗೆ ಅರ್ಥವಾಗುವುದು ಸಾಧ್ಯವಿರಲಿಲ್ಲ. ಬ್ರಿಟೀಶ್ ಆಡಳಿತಕ್ಕೆ ಇವು ಯಾವುದೂ ಮುಖ್ಯವಾಗಿರಲಿಲ್ಲ.

ಎರಡನೆಯದಾಗಿ, ಪ್ರತಿಯೊಂದು ಅದರದ್ದೇ ಅನ್ನಬಹುದಾದ ಕಾನೂನುಗಳನ್ನು (ಅಲಿಖಿತ) ಹೊಂದಿವೆ.

ಮೂರನೆಯದಾಗಿ, ಭಾರತೀಯ ಗ್ರಾಮಗಳು ಕೂಡಾ ಸ್ವತಂತ್ರವಾದ ಅಸ್ತಿತ್ವ ಹೊಂದಿದ್ದು, ಅವುಗಳು ತಮ್ಮ ನಿಯಮಾವಳಿಗಳನ್ನು ಹೊಂದಿವೆ.

ನಾಲ್ಕನೆಯದು, ಯಾವುದಾದರೂ ವ್ಯಾಜ್ಯಗಳು ಇದ್ದಲ್ಲಿ ಆಯಾ ವ್ಯಾಜ್ಯಗಳು ಊರಿನಲ್ಲಿ ಪರಿಹಾರವಾಗದೇ ಹೋದರೆ ಅದು ದೇವಸ್ಥಾನಗಳಲ್ಲಿ ಪರಿಹಾರವಾಗುತ್ತಿತ್ತು. ಮಠಗಳಲ್ಲಿ ಪರಿಹಾರವಾಗುತ್ತಿತ್ತು. ಉದಾ : ಧರ್ಮಸ್ಥಳ, ಸಿರಿಗೆರೆ ಮಠ ಇತ್ಯಾದಿ.

## ಅಧಿಕಾರಶಾಹಿ ಮತ್ತು ಜ್ಞಾನ

"ನೇರವಾಗಿ ದಾಳಿಮಾಡಿ ಅಥವಾ ಪೋಲಿಸ್, ಕಾನೂನು ಇತ್ಯಾದಿಗಳ ಮೂಲಕ ಒಂದು ದೇಶದ ಜನಸಮುದಾಯವನ್ನು ಆಳುವುದಕ್ಕಿಂತಲೂ ಅವರ ಸಂಸ್ಕೃತಿ, ಜೀವನ ಕ್ರಮ, ನಂಬಿಕೆ ಇತ್ಯಾದಿಗಳನ್ನು ಆಕ್ರಮಿಸಿ ನಡೆಸುವ ಅಧಿಕಾರ ಅಥವಾ ಪಡೆವ ಯಜಮಾನಿಕೆ ಪರಿಣಾಮಕಾರಿ ಮತ್ತು ದೀರ್ಘಾಯುಷಿ ಎಂದು ಅನೇಕ ವೈಸರಾಯ್‌ಗಳು ನಂಬಿದ್ದರು. ಫುಕೋ ತನ್ನ ವಾದವನ್ನು ಮಂಡಿಸುವಾಗ ಅಧಿಕಾರ ಮತ್ತು ಜ್ಞಾನದ ನಡುವಿನ ಸಂಬಂಧವನ್ನು ಕುರಿತು ಚರ್ಚಿಸುತ್ತಾನೆ. ಆಡಳಿತಶಾಹಿಯ ಎಲ್ಲಾ ಸಂಸ್ಥೆಗಳ ಮೂಲ ಕಲ್ಪನೆಯೇ ಈ ಅಧಿಕಾರ ಮತ್ತು ಜ್ಞಾನದ ನಿಯಂತ್ರಕ ಶಕ್ತಿಗಳ ಚಿತ್ರಣವಾಗಿದೆ. ಸದಾ ಅಡಿಯಾಳಾಗಿಸಿಕೊಳ್ಳುವ ಅಥವಾ ವಶೀಕರಿಸಿಕೊಳ್ಳುವ ಹುನ್ನಾರದಲ್ಲಿರುವ ಈ ಅಧಿಕಾರಶಾಹಿ ಮತ್ತು ಜ್ಞಾನಶಾಹಿಗಳ ಬಗ್ಗೆ ಫುಕೋ ಚಿಂತಿಸುತ್ತಾನೆ.

"ಫುಕೋನ ಅಧಿಕಾರ ಮತ್ತು ಜ್ಞಾನದ ತತ್ವವು ನೀಶೆಯ ತತ್ವಜ್ಞಾನದ ಪ್ರಭಾವದಿಂದ ಬೆಳೆದು ಬಂದ ಕಲ್ಪನೆಯಾಗಿದೆ. ಅಧಿಕಾರವನ್ನು ತಮ್ಮ ತಾಳಕ್ಕೆ ತಕ್ಕಂತೆ ಆಡಿಸುವ ಕೆಲವು ಏಜನ್ಸಿಗಳು ಜ್ಞಾನವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ

ಬಳಸಿಕೊಳ್ಳುತ್ತವೆ ಮತ್ತು ಈ ಮಧ್ಯವರ್ತಿಗಳೇ ತಮ್ಮ ಕೈಗೊಂಬೆಯಾದ ಸ್ಥಾಪಿತ ಭಾಷಿಕ ಸಂರಚನೆಗಳ ಮೂಲಕ ಸಮಾಜದ ಮೇಲೆ ಹೇರಿಕೆಗಳನ್ನು ಒಡ್ಡುತ್ತವೆ ಎಂದು ಈ ತತ್ವವು ಬಹಳ ಸ್ಪಷ್ಟವಾಗಿ ವಿವರಿಸುತ್ತದೆ. ಇವರ ಪ್ರಕಾರ ಈ ಶಕ್ತಿಯುತ ಅಲ್ಪಸಂಖ್ಯಾತ ಗುಂಪೇ ಸತ್ಯ ಯಾವುದು ಎಂಬುದನ್ನು ನಿರ್ಧರಿಸುತ್ತದೆ. ಸಂಕಥನಗಳ ಮೂಲಕ ಕೆಲಸ ಮಾಡುತ್ತ ಇದು ತನ್ನ ಗುರಿಗಳಿಗೆ ಅನುಕೂಲವಾಗುವಂತೆ ವಸ್ತು ವಿಚಾರಗಳನ್ನು ವ್ಯವಸ್ಥಿತವಾಗಿ ನಿಯಂತ್ರಿಸುತ್ತದೆ ಮತ್ತು ಆಳುತ್ತದೆ" ಎಂದು ಶೆಲ್ಲಿವಾಲಿಯ ಸೈದ್ ಸಿದ್ಧಾಂತವನ್ನು ಚರ್ಚಿಸುವಾಗ ಹೇಳುತ್ತಾರೆ. "ಅಧಿಕಾರ ಶಕ್ತಿಯು ಏಕಕಾಲಕ್ಕೆ ಕಟ್ಟುತ್ತದೆ ಮತ್ತು ಪ್ರಾಬಲ್ಯವನ್ನು ಹೊಂದಿರುತ್ತದೆ. ಯಾಕೆಂದರೆ ಅದಕ್ಕೆ ಜ್ಞಾನದ ಬೆಂಬಲ ಇರುತ್ತದೆ. ಹೀಗಾಗಿ ಜ್ಞಾನವು ಅಧಿಕಾರವನ್ನು ಶಕ್ತಗೊಳಿಸುತ್ತದೆ. ಅಂದರೆ ಈ ಅಧಿಕಾರವು ಜ್ಞಾನವಿಲ್ಲದೆ ಯಾವತ್ತೂ ಕೆಲಸ ಮಾಡಲಾರದು. ಈ ರೀತಿಯ ಅಧಿಕಾರ ಮತ್ತು ಜ್ಞಾನಗಳ ಕೂಟಕ್ರಿಯೆಯು ಜನನಂಬಿಕೆಗಳನ್ನೇ ಹುಟ್ಟಿಸಿ ರೂಪಿಸುವಂಥಾ ಸಂಕಥನಗಳನ್ನು ನಿರ್ಮಾಣ ಮಾಡುತ್ತದೆ ಮತ್ತು ಈ ಎಲ್ಲವೂ ನೈಸರ್ಗಿಕ ಹಾಗೂ ಸಹಜ ಎಂದು ನಂಬುವಂತೆ ಮಾಡುತ್ತದೆ. ಈ ಪರಿಕಲ್ಪನೆಯನ್ನು ಸಂಸ್ಥೆಗಳಿಗೆ ಮತ್ತು ಜ್ಞಾನ ವಸ್ತುಗಳಿಗೆ ಅನ್ವಯಿಸಿದರೆ ಅವು ಹೇಗೆ ಒಂದಾಗಿ ಅಧಿಕಾರದ ಹುನ್ನಾರಗಳ ಮುಖಾಂತರ ಲೋಕವರ್ತನೆಯನ್ನೇ ನಿಯಂತ್ರಿಸುವ ನೆಲೆಯಲ್ಲಿ ಕೆಲಸ ಮಾಡಬಹುದು ಎಂಬುದನ್ನು ನಾವು ಕಾಣಬಹುದು." ಈ ಎಲ್ಲಾ ಕ್ರಿಯೆಗಳ ಹಿಂದಿನ ಉದ್ದೇಶ ಯಥಾಸ್ಥಿತಿಯನ್ನು ಕಾನೂನುಬದ್ಧಗೊಳಿಸುವ ಅಥವಾ ತನ್ನ ಯಜಮಾನಿಕೆಯನ್ನು ಶಾಶ್ವತವಾಗಿರಿಸಿಕೊಳ್ಳಲು ಹೊಸ ಹುನ್ನಾರಗಳನ್ನು ರೂಪಿಸುವುದೇ ಆಗಿದೆ. ಈ ಹುನ್ನಾರಗಳಲ್ಲಿ ತಮ್ಮ ಸಂಕಥನಗಳ ಮೂಲಕ ಜನರನ್ನು ಆಳ್ವಿಕೆಗೆ ಒಪ್ಪಿಸುವ ಇಲ್ಲವೆ ನಿಯಂತ್ರಣಕ್ಕೆ ಒಳಪಡಿಸುವ ಒಳಸಂಚು ಪ್ರಧಾನವಾಗಿರುತ್ತದೆ. ನಾವು ಯಾವುದನ್ನು ಭಾಷೆಯಲ್ಲಿ ವ್ಯಕ್ತಪಡಿಸುತ್ತೇವೆಯೋ ಅವುಗಳ ಮೂಲ ಧಾತುವಾದ ಅನುಭವ ಕೂಡ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಅಥವಾ ನಾವಿಂದು ಯಾವುದನ್ನು ಜ್ಞಾನವೆಂದು ಕರೆಯುತ್ತೇವೆಯೊ ಅದೂ ಕೂಡ ಅಧಿಕಾರವನ್ನು ಹಿಂಬಾಲಿಸಿ ಹೋಗುತ್ತದೆ ಎಂಬುದನ್ನು ಫುಕೋ ಹೇಳುತ್ತಾನೆ." (ಮೂಲ: ಶೆಲ್ಲಿವಾಲಿಯ, ಎಡ್ವರ್ಡ್ ಸೈದ್, ಅನು: ರಾಮಲಿಂಗಪ್ಪ. ಟಿ. ಬೇಗೂರು, ಪುಟ-೨೨, ೨೦೦೩)

ಇದೇ ವಾದವನ್ನು ಮುಂದುವರಿಸುತ್ತಾ ಫುಕೋ ಬಹುಮುಖ್ಯವಾದ ಒಂದಂಶವನ್ನು ಪ್ರತಿಪಾದಿಸುತ್ತಾನೆ. ನಮ್ಮ ಆಲೋಚನೆಗೆ ಬಂದಿದ್ದನ್ನು ಭಾಷೆಯಲ್ಲಿ ನಾವು ಅಭಿವ್ಯಕ್ತಿಸುತ್ತೇವೆ. ಆದರೆ ನಮ್ಮ ಆಲೋಚನಾ ಕ್ರಮವನ್ನೇ ಹಿಡಿತದಲ್ಲಿ ಇರಿಸಿಕೊಂಡು ಅಧಿಕಾರ ಸ್ಥಾಪಿಸುವ ಕೇಂದ್ರಗಳು ಬೇರೆ ಬೇರೆ ಇರುತ್ತವೆ. ಹಾಗಾಗಿ

ಯಾವುದನ್ನು ಬರೆಯಲಾಗಿದೆಯೊ, ಯಾವುದನ್ನು ಚಿತ್ರಿಸಲಾಗಿದೆಯೋ ಅದಷ್ಟೇ ಸತ್ಯವಲ್ಲ. ನಮ್ಮ ಮನೋಸ್ಥಿತಿಯ ಮೇಲೆ, ನಾವು ಅಭಿವ್ಯಕ್ತಿಸುವ ಭಾಷೆಯ ಮೇಲೆ, ನಮ್ಮ ಚಿಂತನೆಯ ಮೇಲೆ ಹಿಡಿತ ಸಾಧಿಸುವ ಅನೇಕ ಸಂಗತಿಗಳು ಅದೃಶ್ಯವಾಗಿ ಇರುತ್ತವೆ ಎಂಬುದನ್ನು ಎಚ್ಚರಿಕೆಯಿಂದ ಗಮನಿಸಬೇಕಾಗಿದೆ ಎಂಬುದು ಫುಕೋನ ಅಭಿಪ್ರಾಯುವಾಗಿದೆ. ಇಂಗ್ಲಿಷ್ ಭಾಷೆಯು ಇಂಗ್ಲೆಂಡಿನ ಅಧಿಕಾರವನ್ನು ಚಲಾಯಿಸಲು ಬೇಕಿದ್ದ ಭಾಷಿಕ ಪರಿಕರ ಮಾತ್ರವೇ ಆಗಿರಲಿಲ್ಲ. ಅದು ಅಧಿಕಾರವನ್ನು ನಡೆಸಲು ಮತ್ತು ಭಾರತೀಯರ ಮೇಲೆ ನಿಯಂತ್ರಣ ಸಾಧಿಸಲು ಬೇಕಾಗಿದ್ದ ಭಾಷೆಯೂ ಆಗಿತ್ತು. ಆದುದರಿಂದ ಭಾರತದಲ್ಲಿ ಇಂಗ್ಲಿಷ್ ಆಯುಧರಹಿತವಾದ ಅಧಿಕಾರ ಭಾಷೆಯಾಯಿತು.

(ನೋಡಿ: Foucault – The order of the Things)

**ಅಧಿಕಾರ ಸಂಕರ**

ಅದೇ ಸಂದರ್ಭದಲ್ಲಿ ದೇಶೀಯರಿಗೆ ಮತ್ತು ಬ್ರಿಟೀಶ್ ಅಧಿಕಾರಕ್ಕೆ ಇದ್ದ ಸಂಬಂಧವನ್ನು ಹೋಮಿಬಾಬಾ Hybridization of power and discourse ಎಂದು ಕರೆಯುತ್ತಾರೆ. (ನೋಡಿ : ಗೌರಿವಿಶ್ವನಾಥನ್. ಪೂರ್ವೋಕ್ತ. ಪು. 96–97 ಮತ್ತು 77).

**ಅಧಿಕೃತ ಜ್ಞಾನ**

'ನಾವು ಮತ್ತು ಅವರು' ಎನ್ನುವುದು ಇಲ್ಲಿ ಮುಖ್ಯವಲ್ಲ. ಜ್ಞಾನದ ಅಧಿಕೃತತೆಯೇ ಮುಖ್ಯವಾಯಿತು. ಇಲ್ಲಿ ಜ್ಞಾನ ಎನ್ನುವುದಕ್ಕೆ ವೈಚಾರಿಕತೆಯೆಂಬ ಅರ್ಥವೇ ಪ್ರಮುಖವಾಯಿತು. ಈ ವೈಚಾರಿಕತೆಯೆಂದರೆ ದೇಸಿ ಮೂಲದಿಂದ ಬಂದುದು ಎಂಬರ್ಥವಲ್ಲ. ಆ ಹೊತ್ತಿನ ಕಲೆಯ ಸ್ವರೂಪವೇ ಅಂಥದ್ದು. ಹೊಸದೊಂದು ರೀತಿಯ ಬರವಣಿಗೆಯ ಅಭ್ಯಾಸವು ಶುರುವಾದಂತಹ ಉತ್ಸಾಹವದು. ಮಾದರಿಗಳ ಆಯ್ಕೆಯೇ ಇಂಗ್ಲೀಷ್ ಕಾಲುವೆಯಿಂದ ವಸಾಹತು ರಾಷ್ಟ್ರಗಳಿಗೆ ಹರಿದು ಬಂತು. ಸ್ವಾತಂತ್ರ್ಯ ಮತ್ತು ಪ್ರಗತಿಪರತೆ ಜೊತೆಜೊತೆಗೆ ಬಂದವು.

(ನೋಡಿ: ಸಂಕರ)

**ಅಧಿಕೃತ ಮತ್ತು ಅನಧಿಕೃತ ಮಾದರಿಗಳು**

ಈ ಸಂದರ್ಭದಲ್ಲಿಯೇ ಬರವಣಿಗೆಯೇ ಜ್ಞಾನದ ಅಧಿಕೃತ ಮಾದರಿಯೆಂಬಂತೆ ಬಿಂಬಿತವಾಯಿತು. ಲಿಖಿತ ಪರಂಪರೆಗೆ ಸೇರದ ಅನೇಕ ಸಾಮಾಜಿಕ ಅಂಶಗಳು ಲಿಖಿತ ಪರಂಪರೆಯೊಳಗೆ ಪ್ರವೇಶಿಸಿ, ಅದರ ಮುಖೇನ ಅನೇಕ "ಅನಧಿಕೃತ"ವೆಂಬ ಸಂಗತಿಗಳು ಅಧಿಕೃತವೆಂಬಂತೆ ರೂಪಿತವಾಯಿತು.

**ಅನಂತತೆ**

ವಸಾಹತು ಕಾಲದಲ್ಲಿ ಚಾಲ್ತಿಗೆ ಬಂದ ಅನಂತತೆ; ವಿಶ್ವಮಾನವತೆ; ಅನಿಕೇತನದ ಅನೇಕ ಲೇಖಕರು ಪರಿಭಾಷೆಗಳನ್ನು ಬಳಸಿದರು. ಇಂಗ್ಲಿಷ್ ಭಾಷೆಯು 'ಅನಂತತೆ' 'ವಿಶ್ವಮಾನವತೆ'ಗಳು ಸಂಗ್ರಹಿಸಬೇಕಾದ ಕೆಲವು ಪರಿಕರಗಳನ್ನು ಒದಗಿಸಿದವು. ಕನ್ನಡದ ಮೂಲಕ ವಿಶ್ವಾತ್ಮಕತೆಯನ್ನು ಗ್ರಹಿಸುವ ನಡಲಡಯು 'ಅನಂತತೆ'ಯಲ್ಲಿದೆ. ಅನಂತವೆಂದರೆ ಮುಕ್ತಾಯವಿಲ್ಲದ್ದು.

**ಅನುಕರಣಾತ್ಮಕ**

ಆಳುವ ವರ್ಗವನ್ನು (ಪ್ರಭುತ್ವವನ್ನು) ಅನುಕರಿಸುವ ವರ್ಗ, ಇದನ್ನು ಹೋ.ಮಿ.ಕೆ. ಬಾಬಾ ಅವರು ಅನುಕರಣಾತ್ಮಕ ನೆಲೆ ಎಂದು ಕರೆಯುತ್ತಾರೆ.

(ನೋಡಿ: ಅನುಕರಣೆ)

**ಅನುಕರಣೆ**

ಭಾರತಕ್ಕೆ ಬಂದ ಮಿಶನರಿಗಳು ಶಾಲೆಗಳನ್ನು ಪ್ರಾರಂಭಿಸುವಾಗ ಭಾರತದವರನ್ನು ನೋಡಿ ಒಂದು ತಾತ್ವಿಕ ನಿರ್ಧಾರಕ್ಕೆ ಬಂದಿದ್ದರು. ಇಲ್ಲಿ ಮನುಷ್ಯರಿದ್ದಾರೆ ಆದರೆ ಮನುಷ್ಯರಾಗಿ ಅವರು ಸ್ವಯಂ ಸಂಪೂರ್ಣರಾಗಿಲ್ಲ. ಇದೇ ಗ್ರಹಿಕೆಯಿಂದ ಅವರು ಭಾರತದಲ್ಲಿ "ಅನುಕರಣೆ"ಯ ತತ್ವವನ್ನು ಪರೋಕ್ಷವಾಗಿ ರೂಪಿಸಿಕೊಂಡರು. ಇದಕ್ಕೆ ಸಹಾಯ ಮಾಡಿರುವುದು ಅಧಿಕಾರ ಮತ್ತು ಜ್ಞಾನದ ಪರಿಕರಗಳು.

ವಸಾಹತು ಸಂದರ್ಭದ ಆರ್ಥಿಕ ನೀತಿಯೂ ಯಜಮಾನಿಕೆ, ಅನನ್ಯತೆ, ಅನ್ಯಸಂಸ್ಕೃತಿಯ ಹೇರುವಿಕೆ, ಚಾರಿತ್ರಿಕ ಬದಲಾವಣೆ ಮೊದಲಾದವುಗಳನ್ನು ಹೇರಿತು. ಇದು ವಸಾಹತು ದೇಶಗಳಲ್ಲಿ ಯುರೋಪಿಯನ್ನರ ಅನುಕರಣೆಗೆ ಕಾರಣವಾಯಿತು. ಉದಾ: ಕೋಟು; ಟೈ; ಶೂ; ಇವುಗಳನ್ನು ಧರಿಸಿಕೊಂಡವರು ನಾಗರಿಕರೆನಿಸಿಕೊಂಡರು. ಪಂಚೆ-ಶಾಲು ಹೊದ್ದವರು; ಸೀರೆಯುಟ್ಟುಕೊಂಡವರು. ಬರಿಗಾಲಲ್ಲಿ ಓಡಾಡುವವರು ಅನಾಗರಿಕರೆನಿಸಿಕೊಂಡರು. ವಾಸ್ತವವಾಗಿ ಇದು ಒಂದು ಬಗೆಯ ಚಾರಿತ್ರಿಕ ವ್ಯಂಗ್ಯ.

ಅನುಕರಣೆಗೆ ಎರಡು ಮುಖ:

೧. ಬಾಹ್ಯದ ಅನುಕರಣೆ- ವೇಷಭೂಷಣ ಇತ್ಯಾದಿಗಳಲ್ಲಿ ಯುರೋಪಿನ ಜನರನ್ನು ಅನುಸರಿಸಿದ್ದು ಇದನ್ನು ನಾಗರಿಕ ಎಂದು ಬಿಂಬಿಸಲಾಯಿತು.

೨. ಆಂತರಿಕ ಅನುಕರಣೆ: ಇದು ಹೊರಜಗತ್ತಿನಲ್ಲಿ ಇರುವವರಿಗೆ ತಿಳಿಯದೆ ಆದರೆ ಬುದ್ಧಿಜೀವಿಗಳ ಒಳಗೆ ನಡೆದ ಪ್ರಕ್ರಿಯೆ.

ಆದರೆ ಮೇಲೆ ಹೇಳಿದ ಎರಡೂ ಸಂಗತಿಗಳಲ್ಲಿಯೂ ಒಂದು ಅಂಶವನ್ನು ನಾವು ಗಮನಿಸಬೇಕು: ಅನುಕರಣೆಯೆನ್ನುವುದು ಮನೋದೈಹಿಕ ವ್ಯಾಪಾರಗಳಲ್ಲಿ ಒಂದು. ವಸಾಹತುಕಾಲದ ಅನುಕರಣೆಯಲ್ಲಿ ಪುನರುಜ್ಜೀವನದ ಅಂಶವೂ ಒಂದಾಗಿತ್ತು. ಇದರಿಂದ ಅನುಕರಣೆಯೆನ್ನುವುದು ವಸಾಹತುಕಾಲದಲ್ಲಿ ಹೊಸ ಮಾದರಿಯ ಸಂಕಥನವಾಗಿ ರೂಪುಗೊಂಡಿತು ಎಂಬುದನ್ನುಮರೆಯಬಾರದು. ಯುರೋಪಿನ ಅನುಕರಣೆಯಿಂದಲೇ ಭಾರತದಲ್ಲಿ ಪುನರುಜ್ಜೀವನ ಚಳುವಳಿಯು ರೂಪುಗೊಂಡಿತು. ಆಧುನಿಕತೆಯು ತತ್ವವು ವೈಚಾರಿಕ ಕ್ರಾಂತಿಯು ಪ್ರಾರಂಭವಾಗಿರುವುದು ಕೂಡಾ ಅನುಕರಣೆಯ ದೆಸೆಯಿಂದ. ಭಾರತೀಯ ಪುನರುಜ್ಜೀವನವು ಒಂದು ಕಡೆಯಿಂದ ನಾಗರಿಕ ಸಂಸ್ಕೃತಿಗಳನ್ನು; ಆಧುನಿಕತೆಯನ್ನು ಅನುಸರಿಸಿ ಸಾಮಾಜಿಕ ಉದ್ಧಾರದ ಪರಿಭಾಷೆಗಳನ್ನು ಚಾಲ್ತಿಗೆ ತಂದವು. ಭಾರತೀಯ ಸಂಸ್ಕೃತಿಯಲ್ಲಿರುವ ಜಾತಿ; ಪೂಜೆ; ದೇವತಾರ್ಚನೆ; ಮಾರಿದೇವತೆಯ ಪೂಜೆಯಿಂದ ಪ್ರಾರಂಭಿಸಿ ಸತಿನಿಷೇಧವರೆಗೂ ಬೇರೆ ಬೇರೆ ಚರ್ಚೆಗಳು ಪ್ರಾರಂಭವಾಗಿರುವುದು ಪಾಶ್ಚಾತ್ಯ ಅನುಕರಣೆಯ ದೆಸೆಯಿಂದ. ಮೂಢನಂಬಿಕೆ; ಜಾತೀಯತೆಯ ತಾರತಮ್ಯಗಳನ್ನು ವಿರೋಧಿಸಿ ವಿಚಾರವಂತರಾಗಬೇಕು ಎಂದು ಹೇಳಿದರೆ, ನಾಸ್ತಿಕರಾಗಿ ಎಂದರ್ಥವಲ್ಲ. ಮತ್ತು ನಾಸ್ತಿಕವಾದಿಗಳೆಲ್ಲ ವಿಚಾರವಂತರಲ್ಲ ಎಂಬ ಪದಗಳು ಹುಟ್ಟಿಕೊಂಡಿರುವುದು ವಸಾಹತು ಕಾಲದಲ್ಲಿ.

ಅನುಕರಣೆಯ ಬಹುಮುಖಗಳು: ಒಂದನೆಯದಾಗಿ ಅನುಕರಣೆ ಎನ್ನುವ ಪದವೇ ಅಂತರವೆಂಬುದನ್ನು ಸೂಚಿಸುತ್ತವೆ. ಒಬ್ಬ ವ್ಯಕ್ತಿ ಇನ್ನೊಬ್ಬನನ್ನು ಅನುಕರಿಸುವುದು "ಬೇರೆ" ಅಥವಾ ಭಿನ್ನ ಚಹರೆಯ ಕಾರಣಕ್ಕಾಗಿ. ಅನುಕರಣೆಯು ಬೇರೆ ಪ್ರಭಾವಗಳಿಂದ ಹುಟ್ಟಿರುತ್ತದೆ.

ಎರಡನೆಯದಾಗಿ, ಸಾಮಾಜಿಕ ಸುಧಾರಣೆ ಭಾರತೀಯ ಸಮಾಜ ಕಾಣಿಸಿಕೊಂಡದ್ದು ಕೂಡಾ ಬ್ರಿಟೀಶ್ ಪ್ರಭುತ್ವದ ಜ್ಞಾನಮಾದರಿಗಳ ಪರಿಕರಗಳಿಂದ. ಆದರೆ ಸಾಮಾಜಿಕ ಸುಧಾರಣೆಯೆನ್ನುವುದು ಅತ್ಯಂತ ಸಂಕೀರ್ಣವಾಗಿತ್ತು. ಸುಧಾರಕರು ಅನೇಕ ಜ್ವಲಂತ ಸಮಸ್ಯೆಗಳನ್ನು ಎದುರು ಹಾಕಿಕೊಳ್ಳಬೇಕಾಯಿತು. ತಾಂತ್ರಿಕವಾಗಿಯೂ ಇದಕ್ಕಾಗಿ ಬೇರೆ ಬೇರೆ ಪ್ರತಿ ವ್ಯೂಹಗಳನ್ನು ಬುದ್ಧಿಜೀವಿಗಳು ರಚಿಸಿಕೊಳ್ಳಬೇಕಾಯಿತು.

ಮೂರನೆಯದಾಗಿ ಪಶ್ಚಿಮದ ಅನುಕರಣೆಯೆಂದರೆ ಸಾಮಾಜಿಕವಾಗಿ ಒಂದು ನಿಯಮಬದ್ಧತೆಯನ್ನು ರೂಪಿಸುವುದು. ಮತ್ತು 'ಸಾಮಾಜಿಕ ಶಿಸ್ತು' ಎಂಬ

ಹೊಸ ಗಡಿರೇಖೆಯನ್ನು ಎಳೆಯುವುದು ಈ ಸೀಮಾರೇಖೆಯಿಂದ ಒಳಗೆ ನಿಂತವರು ನಾಗರಿಕರೆಂದೂ: ಹೊರಗಡೆಗೆ ನಾಗರಿಕರಲ್ಲವೆಂದೂ; ಗುರುತಿಸಲಾಯಿತು.

ನಾಲ್ಕನೆಯದಾಗಿ ಯುರೋಪಿನ ಪ್ರಭುತ್ವವನ್ನು ಒಪ್ಪಿಕೊಂಡವರಲ್ಲಿ ಅವರ ಹಾದಿಯಲ್ಲಿಯೇ ದಾರಿಕೊಂಡವರಲ್ಲಿಯೂ ಯಾವುದನ್ನು ಅನುಸರಿಸಬೇಕು ಯಾವುದನ್ನು ಅನುಸರಿಸಬಾರದು ಎಂಬುದರ ಬಗ್ಗೆ ಗೊಂದಲಗಳಿದ್ದವು. ಅವರಲ್ಲಿಯೂ ತುಂಬಾ ಅಸ್ಪಷ್ಟತೆಯಿತ್ತು: ಬೌದ್ಧಿಕ ಅನುಕರಣೆಯೇ? ನಾಗರಿಕ ಅನುಕರಣೆಯೇ? ಇವು ಮೂಲ ಪ್ರಶ್ನೆ. ಅನುಕರಣೆಯೆಂದರೆ ಯಾವುದು? ಅನುಸರಿಸುವಾಗ ನಮಗೂ ಸಮಾಜಕ್ಕೂ ಯಾವ ರೀತಿಯ ಸಂಬಂಧವಿರಿಸಿಕೊಳ್ಳಬೇಕು ಎನ್ನುವುದು ಅವರ ಮೂಲಭೂತ ಸಮಸ್ಯೆಯಾಗಿತ್ತು.

ಐದನೆಯದಾಗಿ ವಸಾಹತು ಆಡಳಿತದಲ್ಲಿ ಯಜಮಾನಿಕೆಯು ಭಾರತೀಯತೆಯನ್ನು ಜನರನ್ನು; ಸಂಸ್ಕೃತಿಯನ್ನು; ನೋಡಿದ ಕ್ರಮಗಳು ಬೇರೆ. ಆ ಆಡಳಿತಕ್ಕೆ ಇದ್ದುದು ಪಶ್ಚಿಮದ ಕನ್ನಡಕ ಮಾತ್ರ. ವಸಾಹತು ಅಧಿಕಾರವನ್ನು ಅನುಸರಿಸುವುದು ತುಂಬಾ ಕ್ಲಿಷ್ಟಕರವಾದ ಹಾದಿಯೆಂಬುದು ಮೂಲತಃ ಭಾರತೀಯ ಬುದ್ಧಿಜೀವಿಗಳಿಗೆ ಅರಿವಿತ್ತು. ಈ ದೃಷ್ಟಿಯಿಂದ ಭಾರತದಲ್ಲಿ ಅನುಕರಣೆಯು ಅತ್ಯಂತ ಸಂಕೀರ್ಣವಾದ ರೂಪವನ್ನು ಹೊಂದಿತ್ತು.

ಇದರ ಜೊತೆಗೆ ಬಂದ ಪ್ರಮುಖ ಪ್ರಶ್ನೆಯೆಂದರೆ ಜ್ಞಾನ ಮತ್ತು ಅಧಿಕಾರದ ನಡುವಣ ಸಂಬಂಧ. ಬ್ರಿಟೀಶ್ ಮಾದರಿಯ ಕಲಿಕೆಯ ಕ್ರಮದಲ್ಲಿ ಶಾಲಾ ತರಗತಿಗಳಲ್ಲಿ ಕಲಿಸುವ ಪಠ್ಯಪುಸ್ತಕಗಳೇ ಜ್ಞಾನದ ಪ್ರಥಮ ಆಕರವೆಂಬಂತೆ ಬಿಂಬಿತವಾಯಿತು. ಹಾಗೆಯೇ ರಾಜಕೀಯ ಅಧಿಕಾರವೆಂದರೆ ಅದು ವ್ಯಕ್ತಿಯೊಬ್ಬನು ನೀಡುವ ತೀರ್ಪು ಅಲ್ಲ. ಅಧಿಕಾರಕ್ಕೂ ಒಂದು ರೀತಿಯ ಶಿಸ್ತು ಬದ್ಧತೆಯಿದೆಯೆಂದು ಬ್ರಿಟೀಶ್ ಅಧಿಕಾರವು ಪ್ರತಿಪಾದಿಸಿತು. ಇದರ ಪರಿಣಾಮ ಎರಡು ಬಗೆಯದು: ಒಂದು ಅಧಿಕಾರಕ್ಕೆ ನಿರ್ದಿಷ್ಟ ನಿಯಮಾವಳಿಂದ ರೂಪುಗೊಂಡ ಸಂಹಿತೆಗಳಿವೆ. ಇವು ವಿಷಯ ನಿಷ್ಠವಲ್ಲ. ಕಾನೂನುಗಳ ನಡುವೆ ವೈಯಕ್ತಿಕ ಭಾವನಾತ್ಮಕ ಸಂಬಂಧಗಳ ಪ್ರಶ್ನೆಯೂ ಮುಖ್ಯವಲ್ಲ. ಎರಡನೆಯದು ಜ್ಞಾನದ ವ್ಯಾಪ್ತಿ. ವಿಜ್ಞಾನ ತಂತ್ರಜ್ಞಾನ; ಅಭಿವೃದ್ಧಿ; ನಾಗರಿಕತೆ; ವ್ಯಕ್ತಿಯ ಗುಣ ನಡತೆಗಳನ್ನು ತಿದ್ದುವುದು ಈ ಮಾದರಿಯ ಜ್ಞಾನ ಮಾದರಿಗಳಿಗೆ ಮುಖ್ಯವಾಯಿತು. ಯುರೋಪಿನ ಜ್ಞಾನ ಮಾದರಿಯ ಚಿಂತನೆಯ ಕ್ರಮ ಹಳೆಯ ಪಾರಂಪರಿಕ ಜ್ಞಾನ ಮಾದರಿಗಳಿಂದ ಬೇರೆಯಾಗಿತ್ತು. ಹಳೆಯ ಪಾರಂಪರಿಕ ಜ್ಞಾನಮಾದರಿಗೆ (ಅದು ಅಕ್ಷರಕ್ಕೆ ಮಾತ್ರ ಸಂಬಂಧಿಸಿದ್ದಲ್ಲ.) ಅದರದೇ ಬೇರುಗಳಿವೆ. ಆದರೆ ಯುರೋಪಿನ

ಜ್ಞಾನ ಮಾದರಿಯ ಶ್ರೇಷ್ಠತೆಯ ಅಹಂಕಾರ ಸ್ಥಳೀಯ ಜ್ಞಾನ ಪರಂಪರೆಗಳನ್ನು ಬುಡ ಮೇಲು ಮಾಡಿತು. ಇದಕ್ಕೆ ಪೂರಕವಾಗಿ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ರಾಮೈತಾಳ ತನ್ನ ಮಗ ಲಚ್ಚನ ಶಿಕ್ಷಣ ಬಗ್ಗೆ ಯೋಚಿಸುವ ಕ್ರಮವನ್ನು ನೆನಪಿಸಿಕೊಳ್ಳಬಹುದು.

ಭಾರತದಲ್ಲಿ ನಾಗರಿಕತೆಯ ಪ್ರಶ್ನೆಯು ಕೂಡಾ ಹುಟ್ಟಿದ್ದು ಅನುಕರಣೆಯ ಒಂದು ಭಾಗವಾಗಿ. ಸ್ವಾತಂತ್ರ್ಯದ ಹೊಸ ಪರಿಭಾಷೆಗೂ; ನಾಗರಿಕತೆಗೂ; ಹೊಸ ಮಾದರಿಯ ಜ್ಞಾನಮಾದರಿಗೂ ಅಂತರ್ಗತ ಸಂಬಂಧವಿದೆ. ವಸಾಹತು ಪೂರ್ವದಲ್ಲಿ ಭಾರತೀಯ ಜನರು 'ಸ್ವಾತಂತ್ರ್ಯ' ಎನ್ನುವುದನ್ನು ಬಳಸಿದ್ದಾರೆಯೆ? ಇದು ಕುತೂಹಲಕಾರಿಯಾದ ಪ್ರಶ್ನೆ. ನಮ್ಮಲ್ಲಿ ಚಾಲ್ತಿಯಲ್ಲಿದ್ದ ಪಂಚಾಯಿತಿ ಕಟ್ಟೆ; ನ್ಯಾಯತೀರ್ಮಾನ; ದಂಡಕಟ್ಟುವುದು; ಶೀರಾ ಸಹಜವೆಂಬಂತೆ ನಡೆದುಕೊಂಡು ಬಂದಿತ್ತು. ಸ್ವಾತಂತ್ರ್ಯವೆಂಬ ಮಹಾನ್ ನಿರೂಪಣೆಯು ಅನೇಕರಿಗೆ ತಿಳಿದಿರಲಿಲ್ಲ. ವಸಾಹತು ಕಾಲದಲ್ಲಿ 'ಅಧಿಕಾರ'ದ ನಿರ್ದಿಷ್ಟ ನಿರ್ವಚನ ರೂಪುಗೊಂಡಿತು ಎಂದು ಈ ಮೊದಲು ಪ್ರಸ್ತಾವಿಸಲಾಗಿದೆ. ಅಧಿಕಾರವೆನ್ನುವುದು ರೂಪುಗೊಳ್ಳುವುದೇ "ದಾಸ್ಯ"ದ ತಳಹದಿಯ ಮೇಲೆ. ಆದರೆ ವಸಾಹತುಕಾಲದಲ್ಲಿ "ದಾಸ್ಯ" ಎನ್ನುವುದಕ್ಕೂ ಬೇರೆ ರೂಪ ಬಂತು. ದಾಸ್ಯವೆಂದರೆ "ಪರದಾಸ್ಯ"ವೆಂಬ ಅರ್ಥ ಬಂತು. "ದಸ್ಯು" ಎಂಬ ಪದದಿಂದ ದಾಸ್ಯವೆನ್ನುವುದು ಹುಟ್ಟಿಕೊಂಡಿದೆ. ವಾಸ್ತವವಾಗಿ ಅದರ ನಿರ್ವಚನ ಬೇರೆ ವಿಲೋಮ ಸಂಬಂಧದಿಂದ ಹುಟ್ಟಿದ ಮಕ್ಕಳು ದಸ್ಯುಗಳಾಗುತ್ತಾರೆ. ವಸಾಹತುಕಾಲದಲ್ಲಿ ಪ್ರಾರಂಭಗೊಂಡ ಅಧಿಕಾರದ ನೂತನ ವ್ಯಾಖ್ಯೆಗಳು ಜನರಿಗೆ ಸುಲಭವಾಗಿ ತಿಳಿಯುವಂತಿರಲಿಲ್ಲ. ಉದಾ: ಕೋರ್ಟು; ಮುನ್ಸಿಪರು; ತಹಶೀಲ್ದಾರರು; ಪಿನಲ್‌ಕೋಡ್‌ಗಳು; ರುಜು; ಅಥವಾ ಆಧಾರಕ್ಕೆ ಎಡಗೈ ಹೆಬ್ಬೆಟ್ಟಿನರುಜು ಇದರಲ್ಲಿ ಅನೇಕವನ್ನು ಬ್ರಿಟೀಶ್ ವೈಸರಾಯ್‌ಗಳು ಭಾರತಕ್ಕೆ ಅನ್ವಯವಾಗಲಿ ಎಂದು ಮೊಗಲರ ಆಳ್ವಿಕೆಯ ಪರಿಭಾಷೆಯನ್ನು ಬಳಸಿದರು. ಆದರೆ ಅದರೊಳಗಿನ ಪರಿಕರಗಳು ಮಾತ್ರ ಬೇರೆಯಾಗಿದ್ದವು. ಉದಾ: ದಿವಾನರು ಇತ್ಯಾದಿ.

ಕ್ರಿಶ್ಚಿಯನ್ ಮಿಶನರಿಗಳು ಪ್ರಾರಂಭಿಸಿದ ಇಂಗ್ಲೀಷ್ ಭಾಷಾ ಶಿಕ್ಷಣವು ಇಬ್ಬಗೆಯ ಪರಿಣಾಮಬೀರಿತು: ಒಂದು ಪಶ್ಚಿಮದ ಸಾಂಸ್ಕೃತಿಕ ವಿಸ್ತರಣೆ (ಗೌರಿ ವಿಶ್ವನಾಥನ್) ಯುರೋಪಿಯನ್ನರಿಗೂ ಭಾರತೀಯ ಪರಂಪರೆಯ ಅರಿವು ಇದು ಒಂದು ಕಡೆಗೆ ಇದ್ದರೆ ಇನ್ನೊಂದು ಕಡೆಯಿಂದ ರಾಜಕೀಯ ಪುನರ್ ರೂಪೀಕರಣ ಸಾಧ್ಯವಾಯಿತು. (One power one mind ಘೋಷಣೆಯನ್ನು ನೆನಪಿಸಿಕೊಳ್ಳಬೇಕು.) ಹೊಸ ರೀತಿಯ ರಾಜಕೀಯ ಗುಣ–ನಡೆತೆಗಳು

ಕಾಣಿಸಿಕೊಂಡವು. ಎರಡನೆದಾಗಿ ಬ್ರಿಟೀಶ್ ಮಾದರಿಯ ಕಲಿಕೆಯು ಮುಖ್ಯವಾಯಿತು. ಇದು ಕಲಿಕೆಯ ಅನುಕರಣೆ.

ಇದರ ಜೊತೆಗೆ ನಡೆದ ಮತ್ತೊಂದು ಪ್ರಕ್ರಿಯೆಯೆಂದರೆ ಧಾರ್ಮಿಕ ಪುನರುಜ್ಜೀವನ. ವಿವೇಕಾನಂದ; ರಾಮಕೃಷ್ಣ ಪರಮಹಂಸರಿಂದ ಪ್ರಾರಂಭಿಸಿ ಧಾರ್ಮಿಕ ಪರಿಭಾಷೆಗಳನ್ನೇ ರಾಜಕೀಯ ಪರಿಭಾಷೆಯಾಗಿ ಪರಿವರ್ತಿಸಿದ ಗಾಂಧಿಯವರೆಗೂ ಇದರ ವಿಸ್ತಾರವಾದ ನಡೆಯಿದೆ. ಬಹುತೇಕ ಇವರೆಲ್ಲರೂ 'ಸನಾತನ' 'ಉಪನಿಷತ್ತು' 'ಭಗವದ್ಗೀತೆ' 'ಅದ್ವೈತ' ಸಿದ್ಧಾಂತದವರೆಗೂ ಇವರೆಲ್ಲರು ಮಾತಾಡಿದ್ದಾರೆ. ವಸಾಹತುಕಾಲದ ಧಾರ್ಮಿಕ ಪುನರುಜ್ಜೀನದ ಒಂದು ತುದಿ ರಾಜಾರಾಂಮೋಹನ್‌ರಾಯ್ ಇದರ ಇನ್ನೊಂದು ತುದಿ ಗಾಂಧಿ. ಯಂತ್ರ ನಾಗರಿಕತೆಯನ್ನೇ ಗಾಂಧಿಶತ್ರು ಎಂದು ಪರಿಭಾವಿಸಿದ್ದರು. ಅದಕ್ಕಾಗಿ ಅವರು ಪಶ್ಚಿಮದ ಅನುಕರಣೆಯ ಬಗ್ಗೆ ಬಹಳ ಅಸಮಾಧಾನವನ್ನು ಹೊಂದಿದ್ದರು. ಮತ್ತು ಬ್ರಿಟೀಶ್ ಅಧಿಪತ್ಯದ ವಿರುದ್ಧ ಹೋರಾಡುವಾಗ ಧಾರ್ಮಿಕ ಪರಿಭಾಷೆಗಳನ್ನೇ ಬಳಸಿಕೊಂಡರು. ಸತ್ಯಾಗ್ರಹ; ಅಹಿಂಸೆ; ಸನಾತನತೆ; ಧರ್ಮ; ಭಗವದ್ಗೀತೆಯೆಂಬ ಗೋಮಾತೆ–ಇವೆಲ್ಲವೂ ಗಾಂಧಿಗೆ ಮುಖ್ಯವಾಗಿತ್ತು. ರಾಜಾರಾಂಮೋಹನ್‌ರಾಯ್ ಅವರ ಗುರಿ–ಧಾರ್ಮಿಕ ಮೂಢನಂಬಿಕೆಗಳ ವಿರೋಧ. ಸತಿನಿಷೇಧ ಕಾಯಿದೆಯ ಬಗ್ಗೆ ಮೋಹನ್‌ರಾಯ್ ಉತ್ಸುಕರಾಗಿದ್ದರು. ಆದರೆ ನಾವಿಲ್ಲಿ ಗಮನಿಸಬೇಕಾಗಿರುವುದು ಅದಲ್ಲ: ಧಾರ್ಮಿಕ ಪುನರುಜ್ಜೀವನವೆಂಬ ಪ್ರಶ್ನೆಯು ಪುನರ್ ಮೌಲ್ಯಮಾಪನಕ್ಕೆ ಗುರಿಯಾಯಿತು.

೧. ಧರ್ಮವೆಂದರೆ –ಧಾರಣೆಗೆ ಯೋಗ್ಯವಾದುದು ಧರ್ಮ.

೨. ವೈಯುಕ್ತಿಕ ಧರ್ಮ: ವ್ಯಕ್ತಿಗೆ ಸಂಬಂಧಿಸಿದ್ದು.

೩. ಸ್ತ್ರೀಧರ್ಮ (ಮತ) – ಸ್ತ್ರೀಮತ.

೪. ಕುಲಧರ್ಮ (ಮತ) – ಕುಲಾಚಾರ

೫. ಪತಿಧರ್ಮ. (ಮತ) –

೬. ಪ್ರಭುಧರ್ಮ. – ಆಳುವುದು

೭. ಜಾತಿಧರ್ಮ. –

೮. ನಾಟ್ಯ ಧರ್ಮ. (ಭರತ) – ನಾಟ್ಯಶಾಸ್ತ್ರ.

ಹೀಗೆ ಧರ್ಮಗಳಿಗೆ ಬೇರೆ ಬೇರೆ ವ್ಯಾಖ್ಯೆಗಳಿವೆ. ಆದರೆ ಸಮಸ್ಯೆಯೇನಾಯಿತು ಎಂದರೆ ಯುರೋಪಿಯನ್ನರು ಹೇಗೆ ಧರ್ಮವನ್ನು ವ್ಯಾಖ್ಯಾನಿಸ ಹೊರಟರೋ

ಅದೇ ರೀತಿ ಭಾರತೀಯ ಕೆಲ ಬುದ್ಧಿಜೀವಿಗಳು ಅದನ್ನೇ ಅನುಸರಿಸಿದರು. ಇದರಿಂದ ಧಾರ್ಮಿಕ ಪುನರುಜ್ಜೀವನವೆಂದರೆ ಅದು ಇಡಿಯ ಭಾರತಕ್ಕೆ ಅನ್ವಯವಾಗುವ ಮಾದರಿಯದು ಎಂದು ತಿಳಿದುಕೊಂಡರು. ಇದು ವಾಸ್ತವವಾಗಿ ಇಂಗ್ಲೀಷರ ಅನುಕರಣೆಯೇ ಆಗಿತ್ತು. ಅಂದರೆ ಇದನ್ನು ಅನ್ವಯಿಸುವಾಗ ಯುರೋಪಿಯನ್ನರು ಬಳಸಿದ ಪರಿಭಾಷೆ (Idiam)ಯನ್ನೇ ಭಾರತೀಯ ಬುದ್ಧಿಜೀವಿಗಳು ಅನುಸರಿಸಿದರು. ಆದರೆ ಈ ಅನುಕರಣೆಯಲ್ಲಿಯೂ ಬಹಳ ಅಸ್ಪಷ್ಟತೆಯಿತ್ತು. ಉದಾಹರಣೆಗೆ ಸತಿನಿಷೇಧ ಕಾಯಿದೆ ಸಹಗಮನವೆಂಬ ಪದ್ಧತಿಯು ಎಲ್ಲೆಡೆಯಲ್ಲಿಯೂ ಜಾರಿಯಲ್ಲಿತ್ತಾ? ಅದು ಧಾರ್ಮಿಕ ಪ್ರಶ್ನೆಯಾಗಿತ್ತೇ? ಭಾರತದ ಬುಡಕಟ್ಟು ಜನರ ಧರ್ಮ ಯಾವುದು? ಗಾಂಧಿ ದೃಷ್ಟಿಯ 'ಗೋಮಾತೆ'ಯು ಸತ್ತಮೇಲೆ ಅದನ್ನೇ ತಿನ್ನುವ ಕೊರಗರ ಧರ್ಮಯಾವುದು? (ಚೋಮನದುಡಿ ಓದಿ) ಆದುದರಿಂದ ಧರ್ಮದವ್ಯಾಖ್ಯೆ ಸರಳ–ಸುಲಭ–ಏಕಕೇಂದ್ರಿತ ಚಿಂತನೆಯ ಫಲವಲ್ಲ.

(ನೋಡಿ: ಬಾಲಗಂಗಾಧರ – ಸ್ಮೃತಿ–ವಿಸ್ಮೃತಿ)

**ಅನುಕರಣೆಯ ತತ್ವ**

ಸೈದ್ ಗ್ರೀಕ್‌ನ ಸೌಂದರ್ಯಶಾಸ್ತ್ರದಲ್ಲಿ ಚಾಲ್ತಿಗೆ ಬಂದ ಅನುಕರಣೆಯ ತತ್ವವನ್ನು ಯೂರೋಪಿನ ಪಠ್ಯಗಳಿಂದ ಹೊರತು ಪಡಿಸಿ ನೋಡಿದ್ದಾನೆ. ಇದಕ್ಕಾಗಿ ಅವನು ಗ್ರೀಕ್ ದುರಂತ ನಾಟಕಗಳಿಂದ ಪ್ರಾರಂಭಿಸುತ್ತಾನೆ. ಈ ಮುಖೇನ ಯುರೋಪಿನ ಜ್ಞಾನ ಮಾದರಿಗಿಂತ ಪ್ರತಿಜ್ಞಾನ ಪರಂಪರೆಯನ್ನು ಕಟ್ಟುವುದು ಸೈದ್‌ಗೆ ಮುಖ್ಯವಾಯಿತು. ಈ ಕಾರಣಕ್ಕಾಗಿಯೇ ಅನುಕರಣೆಯ ತತ್ವವನ್ನು ಬೇರೆ ಬೇರೆ ರೀತಿಗಳಲ್ಲಿ ಅರ್ಥವಿಸಿಕೊಳ್ಳುವ ಪ್ರಯತ್ನಗಳನ್ನು ಅವನು ಮಾಡುತ್ತಾನೆ.

(ನೋಡಿ: ಬಾಲಸುಬ್ರಹ್ಮಣ್ಯ – ಅರಿಸ್ಟಾಟಲನ ಕಾವ್ಯಮೀಮಾಂಸೆ)

**ಅನುಭವ ಮತ್ತು ನಿರೂಪಣೆ**

ಇವುಗಳ ನಡುವೆ ನಡೆದ ಸಂಕಥನಗಳು ಕೂಡಾ ಏಕಮಾದರಿಯವು ಅಲ್ಲ. ಈ 'ಅನುಭವ' ನಿರೂಪಣೆಗೂ ಇದಕ್ಕಿಂತ ಹೊರತಾಗಿರುವ ಅಂದರೆ ವಸಾಹತುಶಾಹಿ ಆಡಳಿತದ ಅನುಭವ ನೇರವಾಗಿ ದೊರಕದಿರುವ ಸಂಕಥನಗಳ ನಿರೂಪಣೆಗಳು ಬೇರೆ ರೀತಿಯವು.

**ಅನುಮಾನ ಮತ್ತು ಮತಾಂತರ**

ನವೋದಯ ಸಾಹಿತ್ಯದ ಪ್ರಕ್ರಿಯೆಗಳು ಜಾತೀಯ ಸಮಸ್ಯೆ ಬಂದಾಗ ಬಹಳ ಉದಾರವಾಗಿ ನಡೆದುಕೊಂಡಿತು. ಆದರೆ ಮತೀಯ ಸಮಸ್ಯೆ ಬಂದಾಗ ಇಷ್ಟೊಂದು ಉದಾರವಾಗಿ ನಡೆದುಕೊಂಡಿಲ್ಲ. ಗಾಂಧೀ

ವಸಾಹತುಶಾಹಿಯ ಹೋರಾಟದ ಆದರ್ಶ ಇದಕ್ಕೆ ಒಂದು ಮೂಲ ನೆಲೆಯಾಗಿದ್ದರೆ : ಇನ್ನೊಂದು ಕ್ರಿಶ್ಚಿಯನ್ ಮಿಷನರಿಗಳ ಬಗೆಗಿನ ಅನುಮಾನವು ಈ ರೀತಿಯ ನಿಲುವಿಗೆ ಈ ರೀತಿ ಯೋಚನಾ ಕ್ರಮ ಬಂದಿರುವುದಕ್ಕೆ ಮತ್ತೊಂದು ಕಾರಣವೆಂದರೆ ಇಂಗ್ಲೀಷ್ ಪ್ರಭುತ್ವ ರೂಪಿಸಿದ ಶಿಕ್ಷಣ ಮಾದರಿ. ಉದಾರವಾದಿಗಳು ಮತಾಂತರದ ಬಗ್ಗೆ ಅನುಕಂಪದಿಂದ ನೋಡಿದರು. ಆದರೆ ಮತಾಂತರದ ಹಿಂದೆ ಆಳ್ವಿಕೆಯ ಪರಿಭಾಷೆಯಿತ್ತು.

**ಅನುವಾದ**

ಮೆಕಾಲೆಯ ಮಿನಿಟ್‌ನಮೇಲೆ (೧೮೩೫) ಚಾರ್ಲ್ಸ್‌ಗ್ರಾಂಟ್‌ನ ಆಡಳಿತಕ್ರಮ ತುಂಬಾ ಪ್ರಭಾವ ಬೀರಿತ್ತು. ಗ್ರಾಂಟ್ ಶಿಕ್ಷಣದಲ್ಲಿ ಬೇರೆ ಬೇರೆ ರೀತಿಯ ಕೆಲಸ ಮಾಡಿದ್ದ. ಇವನ ಕಾಲದಲ್ಲಿಯೇ ಅನುವಾದದ ಕೆಲಸವೂ ಭರದಿಂದ ಸಾಗಿತ್ತು. ೧೮೮೯ ಸುಮಾರಿಗೆ ನಡೆದ ಮತ್ತೊಂದು ಸಂಗತಿಯನ್ನು ಇಲ್ಲಿ ಉಲ್ಲೇಖಿಸಬೇಕು: ಈ ಕಾಲದಲ್ಲಿ ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಅನುವಾದಕರನ್ನು ಸರಕಾರದ ಚಾಕ್ರಿಗೆ ನೇಮಿಸಿಕೊಳ್ಳಲಾಯಿತು. ಇದರಿಂದ ವಸಾಹತು ಅನುಕರಣೆಗೆ ಮತ್ತಷ್ಟು ಬಲ ಬಂತು. ಇಲ್ಲಿಯೂ ಹೆಚ್ಚಿನ ಒತ್ತು ಬಿದ್ದಿರುವುದು ಇಂಗ್ಲೀಷಿಗೆ ಎಂಬುದು ಗಮನಾರ್ಹ. ಇದರಿಂದ ಬರಹಗಳ ಪ್ರಾತಿನಿಧಿಕ ರೂಪವೇ ಬದಲಾಯಿತು. ಭಾರತೀಯ ಚರಿತ್ರೆಯ ವ್ಯಾಖ್ಯೆಗಳು ಕೂಡಾ.

ವಸಾಹತುಕಾಲದ ಅನುವಾದ ಕಾರ್ಯಗಳು (ಅದು ಸಂಸ್ಕೃತದಿಂದ ಇಂಗ್ಲೀಷಿಗೆ; ಇಂಗ್ಲೀಷಿನಿಂದ ಕನ್ನಡಕ್ಕೆ ಬಂದಾಗ) ವ್ಯತ್ಯಾಸಗಳನ್ನು ನಿರ್ಮಿಸಿಕೊಂಡವು. ಕಾಲ, ಸ್ಥಳ, ಅವಕಾಶಗಳು ಅನುವಾದಗೊಂಡ ಪಠ್ಯಗಳಲ್ಲಿ ಇಲ್ಲ. ಒಂದು ಸಾಹಿತ್ಯ ಕೃತಿಯು ಒಂದು ಸಮಾಜದಲ್ಲಿ ಬೇರೂರಿರುತ್ತದೆ. ಅದನ್ನು ಇನ್ನೊಂದು ಭಾಷೆಗೆ; ಇನ್ನೊಂದು ಸ್ಥಳಕ್ಕೆ ಬಂದಾಗ ಸಹಜವಾಗಿಯೇ ಅಂತರವುಂಟಾಗುತ್ತದೆ. ಈ ಅಂತರ ಕೂಡಾ ಯಾವುದೇ ರೀತಿಯ ಸೀಮೆಯನ್ನು ಹೊಂದಿರುವುದಿಲ್ಲ. ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳನ್ನು ನಾವಿಲ್ಲಿ ಜ್ಞಾಪಿಸಿಕೊಳ್ಳಬಹುದು. ಗ್ರೀಸ್ ದೇಶದಲ್ಲಿ ನಡೆಯುತ್ತದೆ. ಅಂದರೆ ಇಲ್ಲಿ ಒಂದು ಅಂತರವಿದೆ: ಅದು ಕಾಲ; ದೇಶ; ಅವಕಾಶಗಳಿಗೆ ಸಂಬಂಧಿಸಿರುವುದು. ಈ ಅಂತರವೂ ಕೂಡಾ ಗಮನಾರ್ಹವೇ ಆಗಿದೆ. ಷೇಕ್ಸ್‌ಪಿಯರ್‌ನ ಸಮಸ್ಯೆಯು ಕಾಳಿದಾಸನ ಸಮಸ್ಯೆ ಅಲ್ಲವೆನ್ನುವುದು ಇಲ್ಲಿ ಉಲ್ಲೇಖನೀಯ.

**ಅನೇಕ ಜ್ಞಾನ ಪರಂಪರೆ**

ಮನ್ರೋ ಭಾರತೀಯ ಅಧಿಕಾರ ಕ್ರಮವನ್ನು ಮತ್ತು ಅದು ಆಢಳಿತ ನಡೆಸುವ ಕ್ರಮವನ್ನು ಕುರಿತು ಹೀಗೆ ಹೇಳುತ್ತಾನೆ : ಈ ರಾಜ್ಯದ ವ್ಯವಸ್ಥೆಯು

ತುಂಬಾ ನೀರವವಾದ ಕ್ರಮ (Dull response) ಹೊಂದಿದೆ. ಆದರ ಇಲ್ಲಿ ಬೇರೆ ಬೇರೆ ಜ್ಞಾನ ಪರಂಪರೆಗಳಿವೆ ಮತ್ತು ಅವುಗಳ ಬಗ್ಗೆ ಔದಾಸೀನ್ಯ ತುಂಬಿದೆ. ಜನರು ಕಂದಾಚಾರ, ಸಂಪ್ರದಾಯ, ಆಧ್ಯಾತ್ಮಿಕ, ಧರ್ಮ, ಆದಿ ಭೌತಿಕ ಸಂಗತಿಗಳ ನಂಬಿಕೆಯಿರಿಸಿದ್ದಾರೆ. ಯುದ್ಧ ಮತ್ತು ಶಾಂತಿ ಇಲ್ಲಿ ಮರೀಚಿಕೆಯಾಗಿದೆ.

**ಅನ್ಯತೆರಿಗೆಗಳು**

ಮನೆಗಳು, ಮನೆಗಳಿಗೆ ಲಗತ್ತಾದ ಹಿತ್ತಲುಗಳೂ ಇರುವ ಗ್ರಾಮನಿವೇಶನದ ಜಾಗವು, ಮೈದಾನ ಪ್ರದೇಶಗಳಲ್ಲಿ 10 ಗುಂಟೆಗಳಿಗಿಂತಲೂ ಮನೆನಾಡಿನಲ್ಲಿ 20 ಗುಮಟೆಗಳಿಗಿಂತಲೂ ಹೆಚ್ಚಾಗಿಲ್ಲದಿದ್ದರೆ ಅಂಥ ನಿವೇಶನದ ಜಾಗದ ಮೇಲೆ ; (1926 ಪಂಚಾಯಿತಿ ರೆಗ್ಯುಲೇಶನ್)

ಬಿ) ಅ) ಸರ್ಕಾರಕ್ಕಾಗಲಿ ಅಥವಾ ಡಿಸ್ಟ್ರಿಕ್ಟು ಬೋರ್ಡಿಗಾಗಲಿ ಸೇರಿದ್ದು, ಸಾರ್ವಜನಿಕ ಉದ್ದೇಶಗಳಿಗಾಗಿಯೇ ಉಪಯೋಗಿಸಲ್ಪಡುವ ಮತ್ತು ವಾಸಮಾಡುವುದಕ್ಕಾಗಲಿ ಅಥವಾ ಲಾಭವನ್ನು ಪಡೆಯುವ ಉದ್ದೇಶಗಳಿಗಾಗಲಿ ಉಪಯೋಗಿಸಲ್ಪಡದಿರುವ ಅಥವಾ ಹಾಗೆ ಉಪಯೋಗಿಸಲು ಉದ್ದೇಶಿಸಲ್ಪಡದಿರುವ,

ಆ) ಅಥವಾ ಪೂಜಾದಿಗಳನ್ನು ನಡೆಸುವ ಸ್ಥಳವಾಗಿ ಉಪಯೋಗಿಸಲ್ಪಡುವ ಅಥವಾ ಒಂದು ಧಾರ್ಮಿಕ ಅಥವಾ ಸರ್ವಸಾಮಾನ್ಯ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುವ ಯಾವುದಾದರೂ ಕಟ್ಟಡದ ಮೇಲೆ, ಕಟ್ಟಡದ ಭಾಗದ ಮೇಲೆ ಅಥವಾ ಖಾಲಿ ನಿವೇಶನದ ಅಥವಾ ಹಿತ್ತಲಿನ ಮೇಲೆ ;

ಸಿ) ಇನಾಂದಾರರ ವಾಸಗೃಹಗಳು ಮತ್ತು ಇನಾಂ ಗ್ರಾಮಗಳಲ್ಲಿ ಅವರಿಗೆ ಸೇರಿದ್ದಾಗಿದ್ದು, ಅವುಗಳಿಂದ ಯಾವ ನಫೆಯೂ ಬರದೇ ಇರತಕ್ಕಂಥ ನಿವೇಶನದ ಮೇಲೆ ;

ಯಾವ ಕಂದಾಯ, ಸೆಸ್ಸು ಅಥವಾ ತೆರಿಗೆಯನ್ನಾಗಲಿ ವಸೂಲ್ಮಾಡಕೂಡದು

ಎ) ವ್ಯವಸಾಯವೇ ಮುಖ್ಯವಾದ ಮತ್ತು ಏಕಮಾತ್ರವಾದ ಕಸಬಾಗಿವುಳ್ಳ ಜನಗಳಿಗೆ ಸೇರಿದ ಗಾಡಿಗಳು. ಅಂಥ ಜನಗಳು ಬೇಸಾಯದ ಕಾಲಗಳನ್ನು ಬಿಟ್ಟು ಇತರ ಕಾಲಗಳಲ್ಲಿ ಆಗಾಗ್ಗೆ ತಮ್ಮ ಗಾಡಿಗಳನ್ನು ಬಾಡಿಗೆಗೆ ಹೊಡೆದರೂ ಚಿಂತೆಯಿಲ್ಲ. ಪರಂತು, ಅಂಥವರು ವ್ಯವಸಾಯದ ಜತೆಗೆ ಇತರ ಯಾವುದಾದರೂ ಕಸಬನ್ನಾಗಲಿ ಅಥವಾ ಉದ್ಯೋಗವನ್ನಾಗಲಿ ಅನುಸರಿಸುವ ಕಲ್ಲು ಒಡ್ಡರುಗಳಾಗಲಿ, ವರ್ತಕರುಗಳಾಗಲಿ, ವ್ಯಾಪಾರಸ್ಥರಾಗಲಿ, ಕಂಟ್ರಾಕ್ಟರುಗಳೇ ಮುಂತಾದವರಾಗಲಿ ಆಗಿರಕೂಡದು.

ಬಿ) ಕೇವಲ ಮಠಗಳ ಮಟ್ಟಿಗೇ ಸೇರಿ, ಮಠದ ಜಮೀನುಗಳ ಸಾಗುವಳಿಗಾಗಿಯೇ ವಾಡಿಕೆಯಾಗಿ ಉಪಯೋಗಿಸಲ್ಪಡುವ ಗಾಡಿಗಳು.

ಸಿ) ಸಂಸ್ಥಾನದ ಸರಹದ್ದುಗಳಿಗಿಂತ ಹೊರಗಿನ ಪ್ರದೇಶಗಳಿಂದ ಕಲ್ಲು ಒಡ್ಡರುಗಳು ತೆಗೆದುಕೊಂಡು ಬಂದು ಜನಗಳ ಪ್ರಯಾಣಕ್ಕಾಗಲಿ ಅಥವಾ ಸಾಮಾನುಗಳನ್ನು ಸಾಗಿಸುವುದಕ್ಕಾಗಲಿ ಉಪಯೋಗಿಸದೆ ಕೇವಲ ಸರ್ಕಾರಿ ಕಾಮಗಾರಿಗಳಿಗಾಗಿ ಮಾತ್ರವೇ ಉಪಯೋಗಿಸುವ ಗಾಡಿಗಳು.

ಪಂಚಾಯಿತಿಯ ಅಧಿಕಾರದ ಸರಹದ್ದಿನೊಳಗೆ ಇರುವ ಗ್ರಾಮಗಳಲ್ಲಿ ತಮ್ಮ ಕೆಲಸಗಳನ್ನು ವಸ್ತುತಃ ಮಾಡುತ್ತಿರುವ ತೋಟಿಗಳೂ, ತಳಾರಿಗಳೂ ಮತ್ತು ನೀರುಗಂಟಿಗಳೂ ಮತ್ತು ಅವರಿಗೆ ಸೇರಿದ ಮತ್ತು ಅವರ ಸ್ವಾಧೀನದಲ್ಲಿರುವ ಸ್ವತ್ತುಗಳೂ 36ನೆಯ ಪ್ರಕರಣದ ಮೇರೆಗೆ ತೆರಿಗೆಯಿಂದ ವಿನಾಯಿಸಲ್ಪಡತಕ್ಕುದು.

ಈ ಕೆಳಗೆ ಕಂಡ ವಿಧದ ಕಂದಾಯಗಳನ್ನು ವಸೂಲ್ಮಾಡುವ ಬಗ್ಗೆ ಪ್ರತಿಯೊಂದು ಪಮುಚಾಯತಿಯವರೂ ಒಂದು ತೆರಿಗೆಯ ಪಟ್ಟಿಯನ್ನು ತಯಾರ್ಮಾಡಿಸತಕ್ಕುದು.

ಎ) ಮನೆಗಳ ಮೇಲಣ ಕಂದಾಯ.

ಬಿ) ಅಂಗಡಿಗಳ ಮೇಲೆ ಅಥವಾ ವ್ಯಾಪಾರ ಅಥವಾ ಕಸಬನ್ನು ನಡೆಸುವ ಸ್ಥಳದ ಮೇಲೆ ವಸೂಲ್ಮಾಡತಕ್ಕ ಕಂದಾಯ.

ಸಿ) ಗಾಡಿಗಳ ಮೇಲಣ ತೆರಿಗೆ.

ಡಿ) ಖಾಲಿ ನಿವೇಶನಗಳ ಮತ್ತು ಹಿತ್ತಲುಗಳ ಮೇಲಣ ಕಂದಾಯ.

ಇ) ಪಂಚಾಯಿತಿಯವರು ವಸೂಲ್ಮಾಡಲು ಅಧಿಕಾರ ಪಡೆದಿರುವ ಇತರ ಯಾವುದಾದರೂ ಕಂದಾಯ, ಸೆಸ್ಸು, ಅಥವಾ ತೆರಿಗೆ.

**ಅನ್ವೇಷಣೆ**

ಸಾಹಿತ್ಯ, ಕಲೆ, ಸಂಸ್ಕೃತಿ, ವೈಜ್ಞಾನಿಕತೆಗೆ ಸಂಬಂಧಿಸಿ ಹೇಳುವುದಾದರೆ ಬ್ರಿಟೀಶ್ ಆಢಳಿತದ ಸಂದರ್ಭದಲ್ಲಿ ಮಾನವೀಯತೆ ಉದಾರವಾದಿ ಚಿಂತನೆಯ ಕ್ರಮವನ್ನು ಹುಟ್ಟುಹಾಕಿದ ಹಾಗೆ ಅದು ಹೊಸ ಅನ್ವೇಷಣೆಯ ದಾರಿಯನ್ನು ಕಂಡುಕೊಳ್ಳಲು ಕಾರಣವಾಯಿತು. ಈ ರೀತಿಯ ವಸಾಹತು ಅಧಿಕಾರ ಮತ್ತು ಅದರ ಅಧಿಕಾರ ವ್ಯಾಪ್ತಿಗೆ ಒಳಗಾದ ಸಮಾಜದ ನಡುವೆ ರೂಪಾಂತರಗಳು ನಡೆದವು. ಈ ಸಂಬಂಧವನ್ನು ಸೈದ್ ಸಂಕರವೆಂದು ಕರೆಯುತ್ತಾನೆ. ಸಂಕರದ ಪರಿಕಲ್ಪನೆಯು ಸೈದ್ ಹೇಳುವ ಥರ ಎಲ್ಲಾ ಸಾಮಾಜಿಕ ಚಟುವಟಿಕೆಗೆ ಅನ್ವಯಿಸುವುದು ಕಷ್ಟ.

## ಅಪೀಲ್ ಮತ್ತು ರಿವ್ಯೂ

ಹಾಗೆಯೇ ವಸಾಹತು ಕಾಲದ ಪ್ರಮುಖ ಗವರ್ನರ್ ಜನರಲ್ ಆದ ಬೆಂಟಿಂಕ್ "ಬೋರ್ಡ್ ಆಫ್ ಮೆನೇಜ್‌ಮೆಂಟ್ ಇನ್ ರೆವಿನ್ಯೂ" ಮತ್ತು ಇತರ ವಿಭಾಗಗಳನ್ನು ರದ್ದು ಪಡಿಸಲು ಒಪ್ಪದಿದ್ದ ಸಂಗತಿಯನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಆ ಸಂದರ್ಭದಲ್ಲಿ ಪ್ರೆಸಿಡೆನ್ಸಿಗೆ ಉಪ ಸಮಿತಿಗಳಿದ್ದವು. ಡಿ.ವಿ.ಜಿ.ಯವರು ನ್ಯಾಯಸ್ಥಾನಕ್ಕೂ ಶಾಸನ ಸಂಸ್ಥೆಗೂ ಇದ್ದ ವ್ಯತ್ಯಾಸಗಳ ಕುರಿತು ಹೀಗೆ ಹೇಳುತ್ತಾರೆ (ವೃತ್ತ ಪತ್ರಿಕೆ, 1928, ಪು. 110).

ಇಲ್ಲಿಯವರೆಗೆ ತಕರಾರಿಲ್ಲ. ತಕರಾರು ಹುಟ್ಟುವುದು ನ್ಯಾಯ ಸಂಸ್ಥೆಯಾಗಲಿ ಶಾಸನಸಂಸ್ಥೆಯಾಗಲಿ ತನ್ನ ಘನತೆಗೆ ಭಂಗ ಬಂತೆಂದು ಆಕ್ಷೇಪಣೆ ಎತ್ತಿದಾಗ, ಆಗ ದೂರು ಮಾಡುವವನೂ ದಂಡ ವಿಧಿಸುವವನೂ ಒಬ್ಬನೇ ಆಗುತ್ತಾನೆ. ಹೀಗೆ ದೋಷಾರೋಪಣೆ ಮಾಡುವವನೇ ಶಿಕ್ಷೆಯನ್ನು ಕೊಡುವಂತೆ ಇರುವುದು ನ್ಯಾಯಶಾಸ್ತ್ರದ ಮೂಲತತ್ವಕ್ಕೆ ವಿರೋಧ. ಆದರೂ ಈ ವಿಶೇಷ ಸಂದರ್ಭದಲ್ಲಿ ಗತ್ಯಂತರವಿಲ್ಲವೆಂದು ಆ ದ್ವಿಸ್ಥಾನೈಕ್ಯವನ್ನು ಅಂಗೀಕರಿಸಲಾಗಿದೆ. ಈ ಕಾರಣದಿಂದ ಆ ಅಧಿಕಾರ ಪದವಿಯ ಜವಾಬ್ದಾರಿ ದ್ವಿಗುಣವಾಗುತ್ತದೆ. ಆ ಅಧಿಕಾರವನ್ನು ಪ್ರಯೋಗಿಸತಕ್ಕವರು ಅತಿಶಯವಾದ ತಾಳ್ಮೆಯಿಂದಲೂ ಸ್ವಾಭಿಮಾನ ನಿಗ್ರಹದಿಂದಲೂ ನಡೆದುಕೊಳ್ಳಬೇಕು. ಇಂಥಾ ಪ್ರಸಂಗದಲ್ಲಿ ಕೋರ್ಟಿನ ಸಂದರ್ಭವೂ ಶಾಸನ ಸಂಸ್ಥೆಯ ಸಂದರ್ಭವೂ ಒಂದೇ ತೆರದವಲ್ಲ. ಬೇರೆ ಬೇರೆ ಪ್ರಕಾರದವು. 1) ಕೋರ್ಟಿನ ಕೆಲಸ ಒಬ್ಬಾನೊಬ್ಬನ ಅಥವಾ ಕೆಲಮಂದಿ ವ್ಯಕ್ತಿಗಳ ಹಿತಾರ್ಥಗಳಿಗೆ ಸೇರಿದ್ದು, ಶಾಸನ ಸಭೆಯದು ಪ್ರಜಾಸಮಸ್ತದ್ದು. 2) ಕೋರ್ಟು ಪ್ರತ್ಯಕ್ಷವಾಗಿ ಪ್ರಜಾಪ್ರತಿನಿಧಿಯಲ್ಲ. ಶಾಸನ ಸಂಸ್ಥೆಯು ನೇರವಾಗಿ ಪ್ರಜಾಜನ ಪ್ರತಿನಿಧಿ. 3) ಕೋರ್ಟುಗಳು ಇತರರು ರಚಿಸಿದ ಕಾನೂನುಗಳಿಗೆ ಅರ್ಥನಿರ್ಣಯ ಮಾಡಿ ಅವನ್ನನ್ವಯಿಸುತ್ತವೆ ಮತ್ತು ಅವುಗಳ ತೀರ್ಮಾನಗಳ ಮೇಲೆ ಸಾಮಾನ್ಯವಾಗಿ ಅಧಿ ಪ್ರಾರ್ಥನೆ ಪುನರ್ವಿಮರ್ಶನೆ (Appeal and Review)ಗಳಿಗೆ ಅಲ್ಲಿ ಅಧಿಕಾರವ್ಯವಸ್ಥೆ ಇರುತ್ತದೆ. ಶಾಸನ ಸಂಸ್ಥೆಯಾದರೋ ತಾನೇ ಕಾನೂನನ್ನು ರಚಿಸಬಲ್ಲದ್ದು ಮತ್ತು ಅದರ ತೀರ್ಮಾನದ ಮೇಲೆ ಬೇರೆ ತೀರ್ಮಾನವಿಲ್ಲ. ಹೀಗೆ ನ್ಯಾಯ ಸಂಸ್ಥೆ ಶಾಸನ ಸಂಸ್ಥೆಗಳೆರಡರ ಸ್ವಭಾವಗಳೂ ಬೇರೆಬೇರೆಯವು. ಆದ್ದರಿಂದ ನ್ಯಾಯಸಂಸ್ಥೆಗೆ ಸರಿ ಹೊಂದುವ ಎಲ್ಲ ಕಾರ್ಯಕ್ರಮಗಳೂ ಶಾಸನಸಂಸ್ಥೆಗೂ ಹಾಗೆಯೇ ಎಲ್ಲ ವಿಷಯಗಳಲ್ಲಿಯೂ ಸರಿಹೊಂದುತ್ತವೆಂದೂ ಭಾವಿಸಲಾಗದು.

2) ರಾಜ್ಯದಲ್ಲಿ ಎಲ್ಲ ಅಧಿಕಾರ ಸ್ಥಾನಗಳೂ ಮನ್ನಣೆಯನ್ನು ಪಡೆಯಬೇಕಾದುವೇ.

ಹಾಗೇ ಅಧಿಕಾರಸ್ಥಾನಕ್ಕೆ ಎಲ್ಲರೂ ಮನ್ನಣೆ ತೋರಿಸಿ ಅದನ್ನು ಬಲಪಡಿಸುವುದು ಪ್ರಜಾಕ್ಷೇಮಕ್ಕೆ ಯಾವಾಗಲೂ ಅವಶ್ಯವಾಗಿರುತ್ತದೆ. ಆದ್ದರಿಂದ ವಿಹಿತಾಧಿಕಾರಕ್ಕೆ ಗೌರವ ತೋರುವುದು ರಾಷ್ಟ್ರಕನ (Citizen)ಕರ್ತವ್ಯವಾಗುತ್ತದೆ. ರಾಷ್ಟ್ರಕನ ಕರ್ತವ್ಯವೇ ಪತ್ರಿಕಾಕರ್ತನಿಗೂ ಕರ್ತವ್ಯ. ಅವನಿಂದ ಎಲ್ಲ ಅಧಿಕಾರಸ್ಥಾನಗಳಿಗೂ ಗೌರವ ದೊರೆಯಬೇಕಾದದ್ದು ಹೀಗೆ ಯುಕ್ತವಾದರೂ, ಆ ಗೌರವದ ಅಪೇಕ್ಷೆ 1) ಕೋರ್ಟುಗಳಿಗೆ ವಿಶೇಷವಾಗಿರುತ್ತದೆ, 2) ಶಾಸನ ಸಂಸ್ಥೆಗಳಿಗೂ ಆ ಗೌರವದ ಅವಶ್ಯಕತೆ ಬಹಳ ಹೆಚ್ಚಾಗಿರುತ್ತದೆ. ಏಕೆಂದರೆ ನ್ಯಾಯಸಂಸ್ಥೆಗಳೂ ಶಾಸನ ಸಂಸ್ಥೆಗಳೂ ತಮ್ಮ ತಮ್ಮ ಕರ್ತವ್ಯಗಳನ್ನು ಸಮರ್ಪಕವಾಗುವಂತೆ ನಡೆಸಬೇಕಾದರೆ ಅವುಗಳಿಗೆ ಎರಡು ಸಂದರ್ಭಾನುಕೂಲಗಳು ಅವಶ್ಯವಾಗಿರುತ್ತವೆ.

ಎರಡನೆಯದಾಗಿ, ನ್ಯಾಯಾಧಿಕಾರಿಗಳೂ ಶಾಸನ ಕರ್ತರೂ ನಡೆಸುವ ವಿಚಾರಣೆಗಳೂ ಮಾಡುವ ತೀರ್ಮಾನಗಳೂ ಸ್ವತಂತ್ರವೂ ನಿರ್ಭಯವೂ ಆಗಿರಬೇಕು. ಯಾರೊಬ್ಬರ ಬರವಣಿಗೆಯಿಂದಾಗಲಿ ಮಾತಿನಿಂದಾಗಲಿ ಆ ಸ್ವಾತಂತ್ರ್ಯಕ್ಕೆ ಭಂಗ ಬರುವಂತಾದರೆ, ಅಥವಾ ಜಡ್ಜಿಗಳ ಅಥವಾ ಶಾಸಕ ಸದಸ್ಯರ ಮನಸ್ಸಿಗೆ ಭೀತಿಯೋ ಶಂಕೆಯೋ ತಲೆದೋರುವಂತಾದರೆ, ಅಂಥ ಲೇಖನ ಭಾಷಣಗಳನ್ನು ಒಟ್ಟು ರಾಜ್ಯಕ್ಕೇ ಪ್ರತಿಕೂಲಗಳೆಂದು ಭಾವಿಸುವುದು ಯುಕ್ತವಾಗುತ್ತದೆ. (ಡಿ. ವಿ. ಜಿ)

**ಅಪ್ಪರ್ ಸೆಕೆಂಡರಿ**

ಅಪ್ಪರ್ ಸೆಕೆಂಡರಿ (Upper Secondary)ಯ ವರೆಗೆ ಇಂಗ್ಲೀಷ್ ಇಲ್ಲ. ವಸಾಹತುಶಾಹಿ ಶಿಕ್ಷಣ ಪದ್ಧತಿಯಲ್ಲಿ ಕ್ಲಾಸು (ಪ್ರಾಥಮಿಕ / ಮಾಧ್ಯಮಿಕ) ಹಾಗೂ ಉತ್ತೀರ್ಣ/ಅನುತ್ತೀರ್ಣ ಮತ್ತು ನಿರಂತರ ಕಲಿಕೆ (Regular) ಪರಿಕಲ್ಪನೆಗಳು ಎಲ್ಲಾ ಜಾತಿಗೆ ಶಿಕ್ಷಣ. ಶಿಕ್ಷಣದಲ್ಲಿ ವೇಳಾಪಟ್ಟಿ, ಶಿಕ್ಷಕರು – ವಿದ್ಯಾರ್ಥಿಗಳ ನಡುವೆ ಅಂತರ – ಇವುಗಳನ್ನು ಕುವೆಂಪು ಗಮನಿಸಿದ್ದಾರೆ.

ವಿಜಯನಗರ ಮೊದಲಾದ ಹಿಂದೂ ರಾಜ್ಯ ದೊರೆಗಳಂತೆ ಇಂಗ್ಲೀಷರು ಬ್ರಾಹ್ಮಣರಿಗೆ ಹೆದರಲಿಲ್ಲವಾದ್ದರಿಂದ ಶೂದ್ರರ ಮಕ್ಕಳೂ ಶಾಲೆಗಳಿಗೆ ಪ್ರವೇಶಿಸುವಂತಾಯಿತು (ಪು. 93). ಆದರೆ ಬ್ರಾಹ್ಮಣ ಬೆಂಚು–ಶೂದ್ರ ಬೆಂಚು, ಅಂತ ಇತ್ತು ಎಂದು ಕುವೆಂಪು ಹೇಳುತ್ತಾರೆ (ಪು. 94). 1919–1920ರ ಅವಧಿಯಲ್ಲಿ ಇಂಗ್ಲೀಷ್ ಲೋಯರ್ ಸೆಕೆಂಡರಿಯಲ್ಲಿ ಎರಡು ಇಂಗ್ಲೀಷ್ ಪ್ರಶ್ನೆ ಪತ್ರಿಕೆ ಖಾಯಂ, ಮಿಶನ್ ಸ್ಕೂಲ್‌ನಲ್ಲಿ ಶುಲ್ಕ ಇರುತ್ತಿರಲಿಲ್ಲ (ಪು. 119). ಇಲ್ಲಿ 'ಬೆಂಚು' ಎನ್ನುವ ಪರಿಕಲ್ಪನೆಯು ವಿಶಿಷ್ಟವಾಗಿದೆ.

ಪ್ರತಿಭೆಗಳಿಂದಾಗಿ 1771ರಲ್ಲಿ ಬಂಗಾಳದ ರಾಜ್ಯಪಾಲನಾದನು. 1773ರಲ್ಲಿ ರೆಗ್ಯುಲೇಟಿಂಗ್ ಕಾಯಿದೆಯು ಜಾರಿಗೆ ಬಂದಾಗ ಅವನು ಬಂಗಾಳದ ಗವರ್ನರ್ ಜನರಲ್ ಆಗಿ ನೇಮಕಗೊಂಡನು. ಈ ಕಾಯಿದೆಯು ಅವನಿಗೆ ಮದ್ರಾಸ್ ಮತ್ತು ಬೊಂಬಾಯಿ ಪ್ರಾಂತ್ಯಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿತು.

ವಾರನ್ ಹೇಸ್ಟಿಂಗ್ಸ್‌ನು ಹಲವಾರು ವಲಯುಗಳಲ್ಲಿ ಅನೇಕ ಸುಧಾರಣೆಗಳನ್ನು ತಂದನು. ಮೊದಲಿಗೆ ಆಡಳಿತ ವಲಯವು ಅವನ ಗಮನವನ್ನು ಸೆಳೆದಿದ್ದಿತು. ಅದರಲ್ಲಿದ್ದ ನ್ಯೂನತೆಗಳನ್ನು ಬಗೆಹರಿಸಲು ಅವನು ಸರ್ವಪ್ರಯತ್ನ ಮಾಡಿದನು. 1765ರಲ್ಲಿ ಕ್ಲೈವನು ಜಾರಿಗೆ ತಂದಿದ್ದ ದ್ವಿ ಸರ್ಕಾರ ಪದ್ಧತಿಯನ್ನು ಕೊನೆಗಾಣಿಸಿದನು. ಬಂಗಾಳ ಪ್ರಾಂತದ ಮೇಲೆ ಕಂಪನಿಯ ನೇರ ಆಡಳಿತವನ್ನು ಜಾರಿಗೆ ತಂದನು. ಕಂಪನಿಯ ದಿವಾನಿ ಹಕ್ಕಿನ ಪ್ರಕಾರ ಅಲ್ಲಿನ ಕಂದಾಯವನ್ನು ತನ್ನ ಸೇವಕರ ಮುಖಾಂತರವಾಗಿ ನೇರವಾಗಿ ವಸೂಲಿ ಮಾಡುವ ಪದ್ಧತಿಯನ್ನು ರೂಢಿಗೆ ತಂದನು. ಬಂಗಾಳ ಮತ್ತು ಬಿಹಾರ್‌ಗಳ ಉಪ ನವಾಬರ ಹುದ್ದೆಗಳನ್ನು ರದ್ದುಗೊಳಿಸಿದನು.

ಕಂದಾಯವನ್ನು ವಸೂಲಿ ಮಾಡಲು ಮತ್ತು ಆಡಳಿತ ನಡೆಸಲು ಕಲೆಕ್ಟರ್ ಎಂಬ ಅಧಿಕಾರಗಳನ್ನು ನೇಮಕ ಮಾಡಿದನು. ಕಂದಾಯವನ್ನು ಐದು ವರ್ಷದ ಅವಧಿಗೆ ಹರಾಜಿನ ಮೂಲಕ ನಿಗದಿ ಮಾಡಲಾಗಿದ್ದಿತು. ಈ ವ್ಯವಸ್ಥೆಯ ಮೇಲ್ವಿಚಾರಣೆ ನಡೆಸಲು ಕಲ್ಕತ್ತೆಯಲ್ಲಿ ಬೋರ್ಡ್ ಆಫ್ ರೆವಿನ್ಯೂ ವಿಭಾಗವನ್ನು ತೆರೆಯಲಾಯಿತು.

ಉಪ್ಪು, ಅಡಿಕೆ ಮತ್ತು ಹೊಗೆಸೊಪ್ಪುಗಳನ್ನು ಬಿಟ್ಟು ಉಳಿದ ವಸ್ತುಗಳ ಮೇಲೆ ಶೇಕಡ 2 1/2 ಯಷ್ಟು ತೆರಿಗೆಯನ್ನು ಕಡಿಮೆ ಮಾಡಿದನು. ಈ ಸುಧಾರಣೆಗಳ ಪರಿಣಾಮವಾಗಿ ವ್ಯಾಪಾರ ಮತ್ತು ವಾಣಿಜ್ಯಗಳು ಬೆಳೆದವು. ಪ್ರಾಂತ್ಯದ ಒಂದು ಮೂಲೆಯಿಂದ ಇನ್ನೊಂದು ಮೂಲೆಯವರೆಗೂ ವಸ್ತುಗಳು ಯಾವ ಆತಂಕವೂ ಇಲ್ಲದೆ ಹೋಗುತ್ತಿವೆ ಎಂದು ವಾರನ್ ಹೇಸ್ಟಿಂಗ್ಸ್‌ನೇ ಜಂಬ ಕೊಚ್ಚಿಕೊಳ್ಳುತ್ತಿದ್ದ.

ವಾರನ್ ಹೇಸ್ಟಿಂಗ್ಸ್‌ನು ಅನೇಕ ನ್ಯಾಯಾಂಗ ಸುಧಾರಣೆಗಳನ್ನು ಜಾರಿಗೆ ತಂದನು. ಪ್ರತಿಯೊಂದು ಜಿಲ್ಲೆಯಲ್ಲಿಯೂ ಅವನು ದಿವಾನಿ ಅದಾಲತ್ ಮತ್ತು ಫೌಜುದಾರಿ ಅದಾಲತ್ ಎಂಬ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳನ್ನು ಏರ್ಪಡಿಸಿದನು. ಇವುಗಳಿಂದ ಬಂದ ಮೊಕದ್ದಮೆಗಳನ್ನು ಕಲ್ಕತ್ತೆಯಲ್ಲಿದ್ದ ಸಾದರ್ ದಿವಾನಿ ಅದಾಲತ್ ಮತ್ತು ಸಾದರ್ ನಿಜಾಮತ್ ಅದಾಲತ್‌ಗಳು ತೀರ್ಮಾನಿಸುವಂತೆ ಮಾಡಿದನು. ಈ ನ್ಯಾಯಾಲಯಗಳಲ್ಲಿ ಹಿಂದೂ ಮತ್ತು ಮುಸ್ಲಿಂ ಕಾನೂನುಗಳನ್ನು ಬಳಸಲಾಗುತ್ತಿದ್ದಿತು. ಹೇಸ್ಟಿಂಗ್ಸ್‌ನು ಹಿಂದೂ ಕಾನೂನುಗಳ ಕ್ರೋಢೀಕರಣಕ್ಕೆ ಆಜ್ಞೆ ಮಾಡಿದನು. ನ್ಯಾಯಾಡಳಿತವನ್ನು

ಸುಧಾರಿಸುಲೋಸುಗ, ನ್ಯಾಯಾಲಯದ ಕಾರ್ಯಕಲಾಪಗಳನ್ನು ಬರೆದಿಡುವಂತೆ ಆಜ್ಞಾಪಿಸಿದನು. ನ್ಯಾಯ ವಿತರಣೆಗೆ ಗಡಿಯನ್ನು ನಿಷ್ಕರ್ಷ ಮಾಡಿ, ಅಧಿಕ ದಂಡವನ್ನು ರದ್ದುಗೊಳಿಸದನು.

**ಹಿತ್ತಲುಗಳಿಗೂ ತೆರಿಗೆ**

ಮನೆಗಳು, ಗಾಡಿಗಳು, ಖಾಲಿ ನಿವೇಶನಗಳು, ಮತ್ತು ಹಿತ್ತಲುಗಳು ಇವುಗಳ ಮೇಲಣ ತೆರಿಗೆಗಳನ್ನು ಆಯಾ ಮಾಲೀಕನೇ ಕೊಡತಕ್ಕುದು ; ಅವನು ಕೊಡದೆ ತಪ್ಪಿದಲ್ಲಿ ಸದರಿ ಮನೆ ಮುಂತಾದವುಗಳಲ್ಲಿ ವಾಸ ಮಾಡುವ ಅಥವಾ ಅವುಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಮನುಷ್ಯನು ಕೊಡಬೇಕು. ಅಂಗಡಿಗಳ ಮೇಲಣ ತೆರಿಗೆಯನ್ನು ಸದರಿ ಅಂಗಡಿಯನ್ನಿಟ್ಟಿರುವವನು ಕೊಡಬೇಕು; ಒಂದು ವ್ಯಾಪಾರ ಅಥವಾ ಕಸಬನ್ನು ನಡೆಸುವ ಸ್ಥಳದ ಮೇಲಣ ತೆರಿಗೆಯನ್ನು ಸದರಿ ವ್ಯಾಪಾರ ಅಥವಾ ಕಸಬನ್ನು ನಡೆಸುತ್ತಿರುವ ಮನುಷ್ಯನು ಕೊಡಬೇಕು. ಪರಂತು, ಊರಿಂದೂರಿಗೆ ತಿರುಗುತ್ತಾ ವ್ಯಾಪಾರ ನಡೆಸುವ ಮನುಷ್ಯನ ವಿಷಯದಲ್ಲಿ, 1926 ಪಂಚಾಯತಿ ರೆಗ್ಯುಲೇಶನ್.

**ಹುಜೂರು ಜಮಾಬಂದಿ**

ಹುಜೂರು ಜಮಾಬಂದಿ ಎಂದರೆ ಡೆಪ್ಯೂಟಿ ಕಮಿಷನರ್ ಸಬ್ ಡಿವಿಜನ್ ಅಸಿಸ್ಟೆಂಟ್ ಕಮೀಷನರೋ ಬಂದು ಲೆಕ್ಕಗಳನ್ನು ಚೆಕ್ ಮಾಡಿ ರೈತರಿಂದ ಬರುವ ಅರ್ಜಿ ಪರಿಶೀಲಿಸಿ, ಆರ್ಡರ್ ಮಾಡಿ ರುಜು ಮಾಡುವುದು.

(ನವರತ್ನರಾಮರಾಯರು 1983 ·ಪುಟ.149)

**ಹೆಜೆಮನಿ**

ವಾಸ್ತವವಾಗಿ 'ಯಾಜಮಾನ್ಯ' ಅಥವಾ 'ಹೆಜೆಮನಿ' ಎಂಬ ಮಹತ್ವಪೂರ್ಣ ಪರಿಕಲ್ಪನೆ ಕೊಟ್ಟವನು ಇಟಲಿ ದೇಶದ 'ಆಂಟೋನಿಯೋ ಗ್ರಾಮ್ಷಿ'. ಇಟಾಲಿಯನ್ ಭಾಷೆಯಲ್ಲಿ ಜೆಜೆಮೊನಿಯ (Gegemonia) ಎಂಬುದು ಇಂಗ್ಲಿಷ್‌ನಲ್ಲಿ 'ಹೆಜೆಮನಿ' (Hegemony) ಎಂದಾಗಿದೆ. ಗ್ರಾಮ್ಷಿಯ ಪ್ರಕಾರ ಯಜಮಾನಿಕೆಯು ಎರಡು ರೀತಿಯಲ್ಲಿ ಪ್ರಕಟವಾಗುತ್ತದೆ.

1. ನೇರ ಬಲ ಪ್ರಯೋಗದ ಮೂಲಕ ಆಳುವುದು
2. ಜನಸಮ್ಮತಿಯನ್ನು ಹುಟ್ಟು ಹಾಕುವುದರ ಮೂಲಕ ಆಳುವುದು

ಎರಡನೆಯ ಬಗೆ ಹೆಚ್ಚು ಪರಿಣಾಮಕಾರಿ ಮತ್ತು ಪ್ರಭಾವಶಾಲಿಯಾದುದು. ಆಡಳಿತ ವರ್ಗವು ತನ್ನ ಅಧಿಕಾರದ ಶಾಶ್ವತತೆಗಾಗಿ ಸಂಚುಗಳನ್ನು ರೂಪಿಸುತ್ತಾ ಅಧೀನರಾದವರೇ ಸ್ವಯಂ ತಮ್ಮನ್ನಾಳಲು ಒಪ್ಪಿಗೆ ನೀಡುವಂತೆ ಅವರ ಆಲೋಚನಾ ಕ್ರಮವನ್ನು ನಿಯಂತ್ರಿಸುವುದನ್ನು ಈ ಹೆಜೆಮನಿ ಪರಿಕಲ್ಪನೆಯು

ಹೇಳುತ್ತದೆ. "ಈ ಸಂದರ್ಭದಲ್ಲಿ ಸಮಾಜದ ಕೆಲವು ಪ್ರಬಲ ಸಮುದಾಯಗಳ / ವರ್ಗಗಳ ಸಾಂಸ್ಕೃತಿಕ-ವೈಚಾರಿಕ ರಚನೆಗಳಿಗೆ (Cultural-Ideological-Structures) ಅವು ಇತರ ರಚನೆಗಳಿಗಿಂತ ಶ್ರೇಷ್ಠವೆಂದು ಇಡೀ ಸಮಾಜದ ಅವ್ಯಕ್ತ ಮಾನ್ಯತೆ ಇರುತ್ತದೆ. ಈ ಕಾರಣದಿಂದಾಗಿ ಯಾವುದೇ ಬಗೆಯ ಶಕ್ತಿಯ ಅಥವಾ ಅಧಿಕಾರದ ಉಪಯೋಗವಿಲ್ಲದೆಯೂ ಒಂದು ವರ್ಗ-ಸಮುದಾಯ-ರಾಷ್ಟ್ರ ಇನ್ನೊಂದು ವರ್ಗವನ್ನು-ಸಮುದಾಯವನ್ನು-ರಾಷ್ಟ್ರವನ್ನು ವೈಚಾರಿಕ ಹಾಗೂ ಸಾಂಸ್ಕೃತಿಕ ನೆಲೆಗಳಲ್ಲಿ ನಿಯಂತ್ರಿಸಬಹುದು." (ಸಿ. ಎನ್. ರಾಮಚಂದ್ರನ್, ಎಡ್ವರ್ಡ್ ಸೈದ್, ಪುಟ-೧೬, ೨೦೦೩)

ವಸಾಹತು ಆಳ್ವಿಕೆಯ ಈ ಬಗೆಯ ಯಾಜಮಾನ್ಯವು ಪಶ್ಚಿಮಕೇಂದ್ರಿತ ಕಲ್ಪನೆಗಳನ್ನು ಹುಟ್ಟು ಹಾಕಿತು. ಸಹಜವಾಗಿಯೆ ಇದರಿಂದ ಇಂಗ್ಲಿಷರು ನಮಗಿಂತ ಶ್ರೇಷ್ಠರು ಎನ್ನುವ ಪರಿಕಲ್ಪನೆ ಬಂತು. ವಸಾಹತು ರಾಷ್ಟ್ರದ ಜನಸಮೂಹ ಒಟ್ಟಾರೆಯಾಗಿ ಒಪ್ಪಿಕೊಳ್ಳುವಂತಹ ಶೋಷಕ ಕಲ್ಪನೆಗಳನ್ನು ಬಿತ್ತುತ್ತದೆ. ಬಹುಸಂಖ್ಯಾತ ಜನಸಮುದಾಯವನ್ನು ಒಪ್ಪಿಸುವುದರ ಮೂಲಕ ಅವರ ಸಹಕಾರದೊಂದಿಗೇ ಅವರನ್ನು ಆಳುತ್ತಾ ಸದಾ ಅಧಿಕಾರ ಚಲಾಯಿಸಿತು. ಈ ಸಾಂಸ್ಕೃತಿಕ ಯಜಮಾನಿಕೆಯು ಅನೇಕ ಸಂದರ್ಭಗಳಲ್ಲಿ ಸ್ಪಷ್ಟವಿರಲಿಲ್ಲ.

"ಗ್ರಾಮ್ಷಿಯ ಪ್ರಕಾರ ಯಜಮಾನ್ಯವು ಕೆಲವೇಳೆ ತುಂಬಾ ಸೂಕ್ಷ್ಮವಾದ ಪ್ರಭಾವಗಳ ಬಳಕೆಯಿಂದ ಮತ್ತು ಕೆಲವೇಳೆ ಅಪ್ರಜ್ಞಾಪೂರ್ವಕ ನೆಲೆಯ ಪ್ರೇರಣೆಯಿಂದ ಜನಾಭಿಪ್ರಾಯವನ್ನೇ ರೂಪಿಸುತ್ತಿರುತ್ತದೆ. ಇದನ್ನು ಸಾಧಿಸಲು ಕೆಲವೇಳೆ ಭಾಷೆಯನ್ನು ಇದು ಹತಾರವನ್ನಾಗಿ ಬಳಸಿಕೊಳ್ಳುತ್ತದೆ. ಈ ಭಾಷಿಕ ಹತಾರದ ಮೂಲಕವೇ ಬರೆಯಲ್ಪಡುವ ಸಾಹಿತ್ಯ ಮತ್ತು ಇತಿಹಾಸಗಳು ಸಾಮಾಜಿಕ ವ್ಯವಸ್ಥೆಗಳ ಮತ್ತು ಸಂಸ್ಥೆಗಳ ನಿರ್ಮಾಣದಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತವೆ. ಈ ವ್ಯವಸ್ಥೆ ಮತ್ತು ಸಂಸ್ಥೆಗಳೇ ಬಲಾಢ್ಯವರ್ಗದ ಹಿತಾಸಕ್ತಿಗಳನ್ನು ಕಾಪಾಡುವ ಐಡಿಯಾಲಜಿಯನ್ನು ಪೋಷಿಸುವ ಮತ್ತು ಪ್ರತಿಷ್ಠಾಪಿಸುವ ಕೆಲಸವನ್ನು ಮಾಡುತ್ತಿರುತ್ತದೆ. ಇದಕ್ಕೆ ಉದಾಹರಣೆ ಎಂಬಂತೆ ಬ್ರಿಟೀಷ್ ಇತಿಹಾಸ ಮತ್ತು ಸಾಹಿತ್ಯಗಳನ್ನು ನೋಡಬಹುದು. ಇಂಗ್ಲಿಷ್‌ತನದ ವಾಹಕವಾದ ಇಂಗ್ಲಿಷ್ ಭಾಷೆ ಕೂಡ ಇದಕ್ಕೆ ಒಂದು ಉದಾಹರಣೆ." ಎನ್ನುವ ಶೆಲ್ಲಿವಾಲಿಯಾರ ಅಭಿಪ್ರಾಯವು ಸಾಂಸ್ಕೃತಿಕ ಯಜಮಾನಿಕೆಯ ಹಿಂದಿನ ತಾತ್ವಿಕತೆಯನ್ನು ವಿಷದಪಡಿಸುತ್ತದೆ.

ಗ್ರಾಮ್ಷಿಯ ಪ್ರಕಾರ ಆಳುವ ವರ್ಗದ ಶಕ್ತಿಯಿರುವುದು ಅವರ ವರ್ಗಪ್ರಾಬಲ್ಯದಲ್ಲಿ. ಈ ವರ್ಗ ಪ್ರಾಬಲ್ಯಕ್ಕೆ ಪ್ರಭುತ್ವವೇ ಶ್ರೀರಕ್ಷೆ. ಪ್ರಭುತ್ವದ ಮೇಲೆ ಆಳುವ ವರ್ಗ ಹಿಡಿತ ಸಾಧಿಸುವುದು ಕೇವಲ ಬಲಪ್ರಯೋಗದಿಂದಷ್ಟೇ ಅಲ್ಲ. ಉತ್ಪಾದನೆಯ ಮೇಲಿನ ಒಡೆತನ ಮತ್ತು ಪ್ರಭುತ್ವದ ಹತೋಟಿಯನ್ನು ರಕ್ಷಿಸಿಕೊಳ್ಳಲು ಮತ್ತು ಬಲಪ್ರಯೋಗವಿಲ್ಲದೆ ಜನರನ್ನು ನಿಯಂತ್ರಿಸಲು ನಾಗರಿಕ ಸಮಾಜದಲ್ಲಿ

ಜನಜನಿತವಾದ ಕೆಲ ನಂಬಿಕೆ. ಮೌಲ್ಯಗಳು ಭೂಮಿಕೆಯನ್ನು ಒದಗಿಸುತ್ತವೆ. ಇವುಗಳನ್ನು ಆಳುವ ವರ್ಗ ಜತನವಾಗಿ ಪೋಷಿಸುತ್ತದೆ. (ಮೂಲ: ಶೆಲ್ಲಿವಾಲಿಯ, ಎಡ್ವರ್ಡ್‌ಸೈದ್. ಅನು: ರಾಮಲಿಂಗಪ್ಪ. ಟಿ. ಬೇಗೂರು, ಪುಟ-೨೨, ೨೦೦೩) ಆಳರಸರು ಜಮೀನ್ದಾರರು ಧಾರ್ಮಿಕ ಸಂಸ್ಥೆಗಳಿಗೆ ಯಥೇಚ್ಛವಾದ ಪೋಷಣೆ ನೀಡಿದರು. ಆ ಮೂಲಕ ಸಾಮಾನ್ಯರ ಮತ್ತು ಧಾರ್ಮಿಕ ಸಂಸ್ಥೆಗಳ ವಿಶ್ವಾಸಗಳಿಸಿಕೊಂಡರು. ಸಾಮಾಜಿಕ ಶ್ರೇಣೀಕರಣ ನಿಯಾಮಕವಾದದ್ದು, ಹೆಂಗಸರು ದೈಹಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲರು, ಅವರು ದುಡಿಯಲು ಸಮರ್ಥರಲ್ಲ, ಅವರು ಕೇವಲ ಗಂಡಸಿನ ಸಾಧನೆಯ ಕಾರ್ಯಕ್ಕೆ ಸಾಥಿಯಾಗಬೇಕು ಅಷ್ಟೇ ಜನರೆಲ್ಲಾ ರೀತಿಯ ನಂಬಿಕೆಗಳು ಜಾರಿಯಲ್ಲಿರುವುದನ್ನು ಆಳುವ ವರ್ಗ ಅಳಿಸಲು ಯತ್ನಿಸುವುದಿಲ್ಲ. ಅಧಿಕಾರ ಚಲಾವಣೆಗೆ ಅನುಕೂಲವಾಗಿರುವ ಲಿಂಗಭೇದ, ಅಸಮಾನತೆ, ತಾರತಮ್ಯದ ಸಂಗತಿಗಳನ್ನು ಯಾವತ್ತೂ ಆಳುವ ವರ್ಗ ವಿರೋಧಿಸುವುದಿಲ್ಲ. ಇವುಗಳನ್ನು ಮಾಡಿಕೊಳ್ಳುವುದರ ಮೂಲಕ ಹೊಸ ಬಗೆಯ ತಾರತಮ್ಯಗಳಿಗೆ ಸಮರ್ಥನೆ ನೀಡಲು ಮುಂದಾಗುತ್ತದೆ. ಇದು ಆಳುವ ವರ್ಗದ ಅಧಿಕಾರವನ್ನು ಭದ್ರಗೊಳಿಸುತ್ತಲೇ ಹೋಗುತ್ತದೆ.

ಒಂದೆಡೆ ತೋಳ್ಬಲದ ಮೂಲಕ ಆಳುವ ವರ್ಗ ಪ್ರಾಬಲ್ಯ ಪಡೆದರೆ ಇನ್ನೊಂದೆಡೆ  ಸಮ್ಮತಿಯನ್ನು ರೂಪಿಸುವುದರ ಮೂಲಕ ಯಜಮಾನಿಕೆಯನ್ನು ಸ್ಥಾಪಿಸುತ್ತದೆ. ಮೌನಸಮ್ಮತಿಯನ್ನು ಪ್ರಸಂಗ ಬಂದಾಗ ತೋಳ್ಬಲದ ಪ್ರದರ್ಶನಕ್ಕೆ ಸಮರ್ಥನೆಯಾಗಿ ಬಳಸಿಕೊಳ್ಳಬಹುದು; ತೋಳ್ಬಲವೇ ಆಳುವ ವರ್ಗದ ನಾಯಕತ್ವಕ್ಕೆ ಜನಸಮ್ಮತಿಯನ್ನು ದೊರಕಿಸಿಕೊಡುವ ಸಾಧನವೂ ಆಗಬಹುದು. ಯಾವುದೇ ವರ್ಗದ ಶಕ್ತಿ ಸಮಾಜದಲ್ಲಿ ಅದು ಕಾಣಿಸಿಕೊಂಡಿರುವ ಯಜಮಾನಿಕೆಯನ್ನು ಅವಲಂಬಿಸಿರುತ್ತದೆ. ಪ್ರಭುತ್ವವನ್ನು ವಶಪಡಿಸಿಕೊಂಡು, ಉತ್ಪಾದನಾ ವ್ಯವಸ್ಥೆಯನ್ನು ಬದಲಿಸುವ ಮೂಲಕ ಆಳುವ ವರ್ಗದ ತೋಳ್ಬಲವನನು ಏನೋ ಸ್ಪಂದಿಸಬಹುದು; ಅಷ್ಟು ಮಾತ್ರಕ್ಕೆ ಆ ವರ್ಗದ ಯಜಮಾನಿಕೆ ಸಂಪೂರ್ಣವಾಗಿ ನಾಶವಾಗುವುದಿಲ್ಲ. ಆಳುವ ವರ್ಗಕ್ಕೆ ದಕ್ಕುವ ಜನಸಮ್ಮತಿಯ ಹಿಂದೆ ಹಲವು ನಮೂನೆಯ ಮೌಲ್ಯಗಳು, ಬಲಾಬಾಧಿತವಾಗಿರುವಂತೆ ತೋರುವ ಸಂಸ್ಥೆಗಳು ಕೆಲಸ ಮಾಡುತ್ತಿರುತ್ತವೆ." ಇವುಗಳೇ ಯಜಮಾನಿಕೆಯನ್ನು ಒಪ್ಪುವಂತೆ ಮಾಡುತ್ತಿರುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು ಎಂದು ಗ್ರಾಮ್ಷಿ ಹೇಳುತ್ತಾನೆ.

ಗ್ರಾಮ್ಷಿಯು ಕಾಮನ್‌ಸೆನ್ಸ್ ಅಥವಾ ಸಾಮಾನ್ಯ ಗ್ರಹಿಕೆಯ ಬಗ್ಗೆ ಮಾತಾಡುತ್ತಾನೆ. ಒಂದು ಕಾಲದಲ್ಲಿ ನಿರ್ದಿಷ್ಟ ಉದ್ದೇಶ ಇಟ್ಟುಕೊಂಡು ಕಟ್ಟಿರುವ ಪರಿಕಲ್ಪನೆ ಮುಂದೆ ಸಹಜ ಸಾಮಾಜಿಕ ನಂಬಿಕೆಯಾಗಿ ಜನಪ್ರಿಯವಾಗಿ ಬೇರು ಬಿಡುವುದನ್ನೇ ಗ್ರಾಮ್ಷಿ 'ಸಾಮಾನ್ಯ ಗ್ರಹಿಕೆ' (ಕಾಮನ್‌ಸೆನ್ಸ) ಎನ್ನುತ್ತಾನೆ. (ಕೆ.

ಫಣಿರಾಜ್, ಅಂಟೋನಿಯಾ ಗ್ರಾಮ್ಷಿ, ಪುಟ-೪೫. ೨೦೦೩) ಇವುಗಳಿಗೆ ಸಾಕ್ಷಿ, ಪುರಾವೆಗಳ ಅಗತ್ಯವಿರುವುದಿಲ್ಲ. "ಕನ್ನಡಿಗರು ತಮ್ಮ ಭಾಷೆ-ಸಂಸ್ಕೃತಿಗಳ ಬಗ್ಗೆ ಅಭಿಮಾನವಿಲ್ಲದ ಜನ. ಅದೇ ಅನ್ಯ ಭಾಷಿಕರು ದುರಭಿಮಾನಿಗಳು; ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ; ಬ್ರಾಹ್ಮಣರು ಬೌದ್ಧಿಕ ಕೆಲಸಕ್ಕೆ, ಶೂದ್ರರು ದೈಹಿಕ ಕೆಲಸಕ್ಕೆ ಲಾಯಖು; ಮುಸ್ಲಿಮರು ಡಜನ್ ಗಟ್ಟಲೆ ಮಕ್ಕಳನ್ನು ಹಡೆಯುತ್ತಾರೆ; ಕೆಳಜಾತಿಯ ಜನರಿಗೆ ಮೀಸಲಾತಿ ಕೊಟ್ಟಿರುವುದರಿಂದ ಸರ್ಕಾರಿ ಸಂಸ್ಥೆಗಳಲ್ಲಿ ಶಿಸ್ತು, ದಕ್ಷತೆ ಕಡಿಮೆಯಾಗಿದೆ ಇತ್ಯಾದಿ." ಈ ಬಗೆಯ ನಂಬಿಕೆಗಳು ಅಥವಾ ತೀರ್ಮಾನಗಳು ಜನರಲ್ಲಿ ಸಹಜವಾಗಿ ಒಳ ಬಂದಿರುತ್ತವೆ. ಪ್ರತಿಯೊಂದು ಸಮಾಜದಲ್ಲಿಯೂ ಇಂತಹ ಕಾಮನ್‌ಸೆನ್ಸ್ ಇರುತ್ತವೆ ಮತ್ತು ಅವೆಲ್ಲವೂ ಒಂದೇ ಬಗೆಯಾಗಿರುವುದಿಲ್ಲ. ಗ್ರಾಮ್ಷಿ ಇಂತಹ ಸಾಮಾನ್ಯ ಗ್ರಹಿಕೆಗಳಲ್ಲಿ ಆಳುವ ವರ್ಗದ ಹಿತಕಾಯುವಂತಹುಗಳ ಬಗ್ಗೆ ಗಮನ ಹರಿಸುತ್ತಾನೆ. "ಒಂದು ಸಾರಿ ಅಧಿಕಾರಸ್ಥರ ವಿಚಾರಗಳು ಸಾಮಾನ್ಯ ಗ್ರಹಿಕೆಗಳಾಗಿ ಪರಿವರ್ತನೆಯಾದರೆ ಆ ವಿಚಾರಗಳ ಚಲಾವಣೆ ಸುಲಲಿತವಾಗಿ ಬಿಡುತ್ತದೆ. ಈ ವಿಚಾರಗಳಿಂದ ಪ್ರೇರಿತವಾದ ಮೌಲ್ಯಗಳಿಗೆ ಜನಮನ್ನಣೆ ನಿರಾಯಾಸವಾಗಿ ದಕ್ಕಿಬಿಡುತ್ತದೆ; ಈ ಮೌಲ್ಯಗಳನ್ನು ಆಳುವ ಮಂದಿ ಬೇರೆ ಯಾವ ಸಮರ್ಥನೆಯನ್ನೂ ನೀಡದೆ ಚಲಾಯಿಸಬಹುದು! ಇಂತಹ ಸಾಮಾನ್ಯ ಗ್ರಹಿಕೆಗಳು ಆಳುವ ಮಂದಿ ತಮ್ಮ ಯಜಮಾನಿಕೆಯನ್ನು ಜಮಾ ಮಾಡಿ, ಬಡ್ಡಿ ಸಹಿತ ಲಾಭಗಳಿಸುವ ರಾಷ್ಟ್ರೀಯ ಬ್ಯಾಂಕುಗಳು ಎಂದು ಗ್ರಾಮ್ಷಿ ಹೇಳುತ್ತಾನೆ." ಇಂತಹ ಗ್ರಹಿಕೆಗಳು ಅಸಮಾನತೆ ಮತ್ತು ಶೋಷಣೆ ತುಂಬಾ ಸಹಜ ಮತ್ತು ಬದಲಿಸಲು ಆಗದವು ಎಂಬುದನ್ನು ಒಪ್ಪಿಕೊಳ್ಳುವಂತೆ ಮಾಡುವುದರ ಮೂಲಕ ತಮ್ಮ ನಂಬಿಕೆಗಳನ್ನು ಅನುಕರಿಸಿ ಸ್ವೀಕರಿಸುವಾಗಲೇ ಸಾಮಾನ್ಯ ಜನಸಮುದಾಯದ ಮನಸ್ಸಿನಲ್ಲಿ ದ್ವಂದ್ವಾತ್ಮಕ ಐಡಿಯಾಗಳ ಗೊಂದಲವನ್ನು ಬಿತ್ತುವ ಮೂಲಕ ಯಾಜಮಾನ್ಯವು ಬಹಳ ಚೆನ್ನಾಗಿ ಬೇಳೆ ಬೇಯಿಸಿಕೊಳ್ಳುತ್ತದೆ ಎಂಬುದು ಗಮನಿಸಬೇಕಾದುದು.(ಕೆ. ಫಣಿರಾಜ್ ಆಂಟೋನಿಯಾ ಗ್ರಾಮ್ಷಿ, ೨೦೦೩ ಪುಟ-೪೮,-೪೯, ೨೦೦೩) ವರ್ಗ, ಜಾತಿ, ಮತ, ಲಿಂಗ, ದೇಶ, ವಿಚಾರ, ಸಂಸ್ಕೃತಿ, ಭಾಷೆ ಹೀಗೆ ಇಂಥಾ ಅನೇಕ ಭಿನ್ನಭಿನ್ನ ನೆಲೆಗಳಲ್ಲಿ ಯಾವುದು ಶೋಷಣೆಗೆ ಗುರಿಯಾಗಿರುತ್ತದೊ ಅಥವಾ ಅಲಕ್ಷ್ಯಕ್ಕೆ ಈಡಾಗಿರುತ್ತದೊ ಅದೆಲ್ಲವನ್ನು ಕುರಿತು ನಡೆಸಿದ ಅಧ್ಯಯನಗಳೇ 'ಸಬಾಲ್ಟ್ರನ್ ಸ್ಟಡೀಸ್' ಅಥವಾ 'ಪರ್ಯಾಯವಾದಿ ಅಧ್ಯಯನ ಕ್ರಮಗಳು' ಎಂದು ಗುರುತಿಸಲಾಗುತ್ತದೆ. ಜ್ಞಾನ ಹಾಗು ಅಧಿಕಾರದ ನೆಲೆಯಿಂದ ಯಾಜಮಾನ್ಯ ಸ್ಥಾಪಿಸಿದ ಪ್ರಬಲ ವರ್ಗ ಅಥವಾ ಗುಂಪು ರಚಿಸಿರುವ ಮಹಾ ಕಥನಗಳನ್ನು ಕೆಡವಿ ಹಾಕುವ ಉದ್ದೇಶದಿಂದ ಯಾವಾಗಲೂ ಸ್ವಯಂ ಪ್ರತಿನಿಧೀಕರಣ ಕ್ರಿಯೆಯಲ್ಲಿ ಈ ಅಧ್ಯಯನ ಕ್ರಮಗಳು ತೊಡಗಿರುತ್ತವೆ. ಗ್ರಾಮ್ಷಿ ಇದನ್ನೇ 'ಪ್ರತಿ ಯಜಮಾನಿಕೆ' ಎಂದು ಕರೆಯುತ್ತಾನೆ. ಸೈದ್ ಕೂಡಾ ಗ್ರಾಮ್ಷಿಯನ್ನೇ

ಅನುಸರಿಸಿ ತನ್ನ ಓರಿಯಂಟಲಿಸಂನ್ನು ಕಟ್ಟುತ್ತಾನೆ. ಸರಳವಾದ ಮತ್ತು ಏಕಮುಖೀ ನೆಲೆಯಿಂದ ನಿರ್ಮಾಣಗೊಳ್ಳುವ ಚರಿತ್ರೆಯನ್ನು ವಿರೋಧಿಸುತ್ತಲೇ ಅದನ್ನು ಮುರಿದು ಕಟ್ಟುವ ಕ್ರಿಯೆಯಲ್ಲಿ ತೊಡಗಬೇಕೆಂದು ಈ ಅಧ್ಯಯನ ಕ್ರಮಗಳು ಹೇಳುತ್ತವೆ. ಇದುವರೆಗೆ ಯಾವುದು ಅಲಕ್ಷ್ಯಕ್ಕೆ ಅಥವಾ ನಿರ್ಲಕ್ಷ್ಯಕ್ಕೆ ಗುರಿಯಾಗಿತ್ತೋ ಅದನ್ನು ಮುಖ್ಯವಾಹಿನಿಯಲ್ಲಿ ತಂದು ಅಲ್ಲಿನ ಅನನ್ಯತೆ ಮತ್ತು ಜ್ಞಾನ ಪರಂಪರೆಗಳನ್ನು ಆಳುವ ವರ್ಗದ ಸಂಕಥನಗಳೊಂದಿಗೆ ಮುಖಾಮುಖಿಯಾಸಬೇಕೆಂಬುದು ಈ ಅಧ್ಯಯನ ಕ್ರಮಗಳ ತಾತ್ವಿಕ ನಿಲುವು. "ಭಾರತದಲ್ಲಿ ಕೆಳಸ್ತರದ ವರ್ಗಗಳ ಇತಿಹಾಸವನ್ನು ಭಾರತದ ರಾಷ್ಟ್ರೀಯ ಯಜಮಾನ ಪರಿಕಲ್ಪನೆಗಳಿಗೆ ವಿರುದ್ಧವಾಗಿ ರಂಜಿತ್‌ಗುಹಾ, ಪಾರ್ಥಚಟರ್ಜಿ, ಜ್ಞಾನೇಂದ್ರಪಾಂಡೆ ಮುಂತಾದವರ ಸಂಪಾದಕತ್ವದಲ್ಲಿ ಬರುತ್ತಿರುವ ಸಬಾಲ್ಟ್ರನ್ ಸ್ಟಡೀಸ್ ಸಂಪುಟಗಳಲ್ಲಿ ಗ್ರಾಮ್ಷಿ ದೃಷ್ಟಿಕೋನದಿಂದ ದಾಖಲಿಸಲಾಗಿದೆ." ಆಳುವವರ ಮತ್ತು ಆಳಿಸಿಕೊಳ್ಳುವವರ ನಡುವೆ ಪರಸ್ಪರ ಸಂವಾದವಿರುತ್ತದೆ. ಈ ಸಂವಾದವೆನ್ನುವುದು ತುಂಬಾ ಸಂಕೀರ್ಣವಾಗಿರುತ್ತದೆ. ಇಲ್ಲಿಂದಲೇ ಯಜಮಾನಿಕೆ ರೂಪುಗೊಳ್ಳುತ್ತದೆ. ಯಜಮಾನಿಕೆ ರೂಪುಗೊಳ್ಳುವುದೇ ಆಳಿಸಿಕೊಳ್ಳುವ ವರ್ಗವನ್ನು ಹಿಡಿತದಲ್ಲಿ ಇರಿಸಿಕೊಳ್ಳುವ ಮೂಲಕ. (ಕೆ. ಫಣಿರಾಜ್. ಆಂಟೋನಿಯೋ ಗ್ರಾಮ್ಷಿ, ಪುಟ-೫೫, ೨೦೦೩) ಇದನ್ನು ಅರ್ಥಮಾಡಿಕೊಳ್ಳಬೇಕು ಮತ್ತು ಇದರಿಂದ ಬಿಡಿಸಿಕೊಂಡು ಪ್ರತಿ ಯಜಮಾನಿಕೆಯನ್ನು ಕಟ್ಟಬೇಕಾದುದು ಅಗತ್ಯ.

**ಹೊಸ ಉದ್ಯೋಗದ ಅಲೆಮಾರಿಗಳು**

ಕನ್ನಡದ ಬರಹಗಳಲ್ಲಿ ಇಂಗ್ಲಿಷ್ ಕಲಿತ ಒಳ್ಳೆಯವರಿದ್ದಾರೆ, ಕೆಟ್ಟವರೂ ಇದ್ದಾರೆ. ಊರು ಬಿಟ್ಟವರೂ ಇದ್ದಾರೆ. ಮರಳಿ ಊರಿಗೆ ಬಂದು ನೆಲೆಯೂರಿದವರೂ ಇದ್ದಾರೆ. ಆದರೆ ಈ ಪರಿಕಲ್ಪನೆಗಳಿಗೆ ಪ್ರಾದೇಶಿಕವಾದ ಜೀವವಿದೆ; ಕಾದಂಬರಿಗಳಲ್ಲಿ ಸಾಂದರ್ಭಿಕ ಅರ್ಥಗಳಿವೆ. ಹೀಗಾಗಿ ಕನ್ನಡ ಬರಹಗಳಲ್ಲಿ ವಸಾಹತುಶಾಹಿ ಶಿಕ್ಷಣ ಕ್ರಮದ ತೀವ್ರವಾದ ವಿರೋಧ ಅಥವಾ ಅತ್ಯಂತ ತೀವ್ರವಾದ ಉತ್ಸಾಹ ಎರಡೂ ಇಲ್ಲ. ಈ ದೃಷ್ಟಿಯಿಂದ ರಾಷ್ಟ್ರೀಯತೆಯು ರಾಜಕೀಯ ಮತ್ತು ನೈತಿಕ ಒಗ್ಗಟ್ಟಿಗೆ ಕಾರಣವಾಯಿತು. ವಿಶೇಷವೆಂದರೆ ಇಂಗ್ಲೀಷ್ ಶಿಕ್ಷಣ; ಅದು ರೂಪಿಸಿದ ಉದ್ಯೋಗ ಮತ್ತು ಅಲೆಮಾರಿತನಕ್ಕೆ ಒಂದು ಸಂಬಂಧವಿದೆ.

**ಹೊಸ ಪರಿಭಾಷೆಗಳು**

ವಸಾಹತು ಕಾಲದಲ್ಲಿ ಸ್ವಾತಂತ್ರ್ಯ, ರಾಷ್ಟ್ರೀಯತೆಗಳ ಪರಿಕಲ್ಪನೆಗಳು ಹುಟ್ಟಿಕೊಂಡ ದೆಸೆಯಿಂದ ಆಂದೋಲನಾಕಾರರು ಹೊಸ ಪರಿಭಾಷೆಗಳನ್ನು ಹುಟ್ಟು ಹಾಕಿಕೊಂಡರು.

| | ಬ್ರಿಟೀಶ್ ಆಢಳಿತ | | ರಾಷ್ಟ್ರೀಯತಾವಾದಿಗಳು |
|---|---|---|---|
| 1. | ಕಾನೂನು | – | ಕಾನೂನು ಭಂಗ |
| 2. | ಕಂದಾಯ | – | ಕಂದಾಯ ನಿರಾಕರಣೆ |
| 3. | ಹಿಂಸೆ | – | ಅಹಿಂಸೆ |
| 4. | ಬಂಡವಾಳದಿಂದ ಹುಟ್ಟಿಕೊಂಡ ವ್ಯಕ್ತಿವಾದ | – | ಸಮೂಹವಾದ, ನಾವೆಲ್ಲರು ಒಂದು |
| 5. | ನಾಗರಿಕತೆಯ ಪರಿಭಾಷೆ | – | ಹಿಂದೂ ಮತ್ತು ಮುಸ್ಲಿಂ ಧರ್ಮದ ಸನಾತನೆಯ ಹುಡುಕಾಟ |
| 6. | ವೈಯಕ್ತಿಕ ಜಗಳಕ್ಕೆ – ಕೋರ್ಟು ಪರಿಹಾರ | – | ವೈಯಕ್ತಿಕತೆಯನ್ನು ಬಿಡಬೇಕಾದ ಅಗತ್ಯ |
| 7. | ಗ್ರಾಮೀಣ ಜನರನ್ನು ಬಲಹೀನರನ್ನಾಗಿ ನಿಸಶ್ತ್ರೀಕರಣ ಕಾಯಿದೆ – ಅಪರಾಧ ಸಂಹಿತೆ | – | ಅಹಿಂಸಾತ್ಮಕ ಹೋರಾಟ (ಗಾಂಧಿ) |
| 8. | ಜಾತಿ–ಅಭಿವೃದ್ಧಿಗೆ ಮಾರಕ | – | ಜಾತಿಯು – ವರ್ಣಾಶ್ರಮದ ಜೊತೆಗೆ ಸಂಬಂಧವಿರಿಸಿಕೊಂಡಿದೆ (ಗಾಂಧಿ) |
| 9. | ಸರಕುಗಳು ಮಾರಾಟಕ್ಕೆ | – | ಸ್ವಾವಲಂಬನೆಯ ಅಗತ್ಯ (ಗಾಂಧಿ) |
| 10. | ಆರ್ಥಿಕ ಕೇಂದ್ರೀಕರಣ | – | ಗ್ರಾಮೀಣ ಸ್ವಾವಲಂಬನೆ (ಗಾಂಧಿ) |
| 11. | ವೈಯಕ್ತಿಕ ಆಸ್ತಿಯ ಕಾಯಿದೆ | – | ವೈಯಕ್ತಿಕ ಆಸ್ತಿ, ವೈಯಕ್ತಿಕ ಹಸಿವೆಯ ನಿರಾಕರಣೆ |
| 12. | ಆಧುನಿಕತೆಯ ಪ್ರತಿಪಾದನೆ | – | ಆಧುನಿಕತೆಯು ಮನುಷ್ಯರನ್ನು ಕೈದಿಗಳನ್ನಾಗಿ ಮಾಡುತ್ತವೆ (ಗಾಂಧಿ) |
| 13. | ಜ್ಞಾನವು ಸಾಂಸ್ಥೀಕರಣವಾಗಬೇಕು | – | ಸಾಂಸ್ಥೀಕರಣವಲ್ಲ, ಆದುದರಿಂದ ಸತ್ಯಾಗ್ರಹಿಗಳು ಶಾಲಾ–ಕಾಲೇಜು, ಕೋರ್ಟುಗಳನ್ನು ಧಿಕ್ಕರಿಸಬೇಕು |
| 14. | ಭೂಮಿ – ಒಂದು ಆಸ್ತಿ | – | ಮಾತೃದೇಶದ ಪರಿಕಲ್ಪನೆ, ಭೂಮಿಯೊಂದಿಗೆ ಭಾವನಾತ್ಮಕ ಸಂಬಂಧ |

| | | | |
|---|---|---|---|
| 15. | ಕಲೋನಿಯಲ್ ಆಢಳಿತವು ಲಿಖಿತ ರೂಪದ ತಿಳುವಳಿಕೆ | – | ಭಾರತೀಯತೆಯ ಆದರ್ಶ |
| 16. | ಹಳೆಯ ರಾಜ್ಯಗಳು ಮತ್ತು ಗ್ರಾಮಗಳು – ಜಗಳಗಳಿಂದ ಸೋತು ಹೋಗಿವೆ | – | ಹೊಸ ರಾಷ್ಟ್ರೀಯತೆಯ ಪರಿಕಲ್ಪನೆ (ಆಗಿನ ರಾಷ್ಟ್ರೀಯ ಕಾಂಗ್ರೆಸ್) |
| 17. | ಭಾರತೀಯ ಧರ್ಮ, ಮೂರ್ತಿ ಪೂಜೆಗಳ ನಿರಾಕರಣೆ | – | ಸನಾತನ ಧರ್ಮದ ಅನುಷ್ಠಾನದ ಅಗತ್ಯ, ಸನಾತನ ಧರ್ಮದಲ್ಲಿ ಒಳ್ಳೆಯ ಅಂಶಗಳಿವೆ (ಗಾಂಧಿ) |
| 18. | ನವನಾಗರಿಕತೆಯು ಅರ್ಥಪೂರ್ಣ | – | ಅದು ವ್ಯಕ್ತಿವಾದ, ರಾಷ್ಟ್ರೀಯತೆಗೆ ವ್ಯಕ್ತಿವಾದ ಮುಖ್ಯವಲ್ಲ |
| 19. | ದಂಡ ಸಂಹಿತೆಗೆ ಮನುಷ್ಯ ಮುಖ್ಯವಲ್ಲ, ಕಾನೂನು ಮುಖ್ಯ | – | ಮಾನವತೆಯ ಚೈತನ್ಯ ಮುಖ್ಯ ಅದು ಸಾಧಿಸಬೇಕಾಗಿರುವುದು |

**ಹೊಸಮಾದರಿಯ ಉತ್ಪಾದನೆಗಳು**

ವಸಾಹತುಶಾಹಿ ಅನುಭವದಲ್ಲಿ ಹೊಸ ಉತ್ಪಾದನಾ ಸಂಬಂಧಗಳು ರೂಪುಗೊಂಡತಷ್ಟೆ. ಒಂದು ಅಧ್ಯಯನದ ಪ್ರಕಾರ ವಸಾಹತುಶಾಹಿ ಅನುಭವದಲ್ಲಿ ಪ್ರಾರಂಭವಾದ ಕೈಗಾರಿಕೋದ್ಯಮಗಳು ಭಾರತೀಯ ಬೂರ್ಜ್ವಾವರ್ಗಗಳ ನಿರ್ಮಾಣಕ್ಕೆ ಕಾರಣವಾಯಿತು. (ಇದರ ಬಗೆಗೆ ವಿವರವಾಗಿ ಅಹಮದಾಬಾದ್‌ನ ಪ್ರಕರಣವನ್ನೆತ್ತಿಕೊಂಡು ಸಲೀಮ್‌ಲಾಖಾ ಅವರು ಚರ್ಚಿಸಿದ್ದಾರೆ. ವಿವರಗಳಿಗೆ ನೋಡಿ: Salim Lakha 1988, Capitalism and class in Colonial India, The Case of Ahamadabad.) ಈ ಹೊಸ ಉತ್ಪಾದನಾ ಸಂಬಂಧಗಳ ಪರಿಣಾಮವಾಗಿ ಪ್ರಕೃತಿಯ ಆರಾಧನೆ, ಸಂಪ್ರದಾಯ, ಮೊದಲಾದವುಗಳ ಬಗೆಗಿನ ಕಲ್ಪನೆಗಳು ಬದಲಾದವು.

ವಸಾಹತು ಕಾಲದಲ್ಲಿ ಶುದ್ಧ ಶೈಕ್ಷಣಿಕವಲ್ಲದ ಮತ್ತೊಂದು ಮಾದರಿಯು ರೂಪುಗೊಂಡಿತು. ಇವುಗಳು ಬೇರೆ ಬೇರೆ ವಿಷಯಗಳ ಕುರಿತಂಥ ಚರ್ಚೆಗಳು ಗೋಧಿಯ ಆಮದು; ಸುಂಕದ ಪದ್ಧತಿ; ಉಪ್ಪಿನತೆರಿಗೆ; ರಾಷ್ಟ್ರೀಯತೆ; ಸ್ವದೇಶಾಭಿಮಾನ; (ಎಂ. ಎಸ್. ಪುಟ್ಟಣ್ಣ–ನೀತಿ ಚಿಂತಾಮಣಿಯೆಂದೇ ಕೆಲವು ಪುಸ್ತಕ ಬರೆದಿದ್ದರು) ಪ್ರಾದೇಶಿಕತೆ–ಹೀಗೆ. ಇವೆಲ್ಲವೂ ವಸಾಹತು ಕಾಲದ ಪ್ರಮುಖ ಸಮಸ್ಯೆಗಳೇ ಸ್ವದೇಶದ ಬಗೆಗಿನ ಹೋರಾಟ ಯಾವ ಮಾದರಿಯದಾಗಬೇಕು; ಬುಡಕಟ್ಟಿನ ಸಮಸ್ಯೆಯೇನು ಸಂಸ್ಕೃತಿಯ ಅನನ್ಯತೆಯು ಯಾವ ಬಗೆಯದು. ರಾಷ್ಟ್ರ ಯಾವ ರೀತಿಯಲ್ಲಿರಬೇಕು ಇವೆಲ್ಲವೂ ಹೊಸ ಹೊಸ ಮಾದರಿಯ ಪ್ರಶ್ನೆಗಳಾಗಿದ್ದವು. ಯುರೋಪಿನ ಕೇಂದ್ರಿತ ಅಧಿಕಾರ ಮತ್ತು ಅದರ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಸಮಾಜಗಳ ನಡುವಣ ಸಂಘರ್ಷದಲ್ಲಿ ಈ ಬುದ್ಧಿಜೀವಿಗಳು ಪರ ಮತ್ತು ವಿರೋಧಗಳ ನಡುವೆ ವಾಸಿಸಬೇಕಾಯಿತು. ಬುದ್ಧಿಜೀವಿಗಳು ಪರ ವಿರೋಧದ ದ್ವಂದ್ವಾತ್ಮಕತೆಯಿಂದಾಗಿ ಒಂದರ ಪರವಾದ ನಿಲುವು; ಬ್ರಿಟೀಶರ ವಿರುದ್ಧದ ನಿಲುವು ಎಂಬ ಸರಳ ವರ್ಗೀಕರಣ ಮಾಡುವಂತಿರಲಿಲ್ಲ. ಅಥವಾ ನಿರ್ವಸಹಾತೀಕರಣದ ಪ್ರಶ್ನೆಯನ್ನು ಕೂಡಾ ಒಂದೇ ತಾತ್ವಿಕತೆಯೆಂದು ವಿವರಿಸುವಂತಿಲ್ಲ. ವಸಾಹತು ಸಂದರ್ಭದಲ್ಲಿ ಬಂದ ಮಿಶನರಿಗಳು ನಡೆಸಿರುವ ಕೆಲಸ ಕಾರ್ಯಗಳು ಒಂದು ಗುರಿಯನ್ನು ಇಟ್ಟುಕೊಂಡಿದ್ದವು. ಶಿಕ್ಷಣ, ಸಮಾಜಸೇವೆ, ಮತಾಂತರಗಳು ಚರ್ಚ್‌ಗಳ ಕೇಂದ್ರ ಗಮನದಲ್ಲಿದ್ದವು ಕಾರಂತರ 'ಕುಡಿಯರ ಕೂಸು' ಕಾದಂಬರಿಯಲ್ಲಿ ಈ ಮಾದರಿಯ ಚಿತ್ರಣಗಳಿವೆಯೆಂಬುದು ಗಮನಾರ್ಹವಾಗಿದೆ. ಕೆಳಜಾತಿಯವರ ಮೇಲೆ 'ಅವರ' ಗಮನವಿತ್ತು. ಇಲ್ಲಿ ಎರಡು ಅಂಶಗಳಿವೆ: ಒಂದು ಕೆಳಜಾತಿಯವರಿಗೆ ಇದ್ದ ಸ್ಥಾನದ ಸಮಸ್ಯೆ; ಇನ್ನೊಂದು ಬಡತನ. ಆದರೆ ಮತಾಂತರ ಹೊಂದಿದವರು ತುಂಬಾ ಒಳ್ಳೆಯ ಸ್ಥಾನಮಾನ

ಪಡೆದಿರಲಿಲ್ಲವೆಂಬುದು ಗಮನಾರ್ಹ. ಮಿಶನರಿಗಳು ಈ ಮೂಲಕ ತಮ್ಮ ಹಿಡಿತದೊಳಗೆ ಸಾಮಾನ್ಯರನ್ನು ನಿಯಂತ್ರಿಸುವ ಪ್ರಯತ್ನ ಮಾಡಿದರು. ಆದರೆ ಈ ಕೆಲಸ ಕಾರ್ಯಗಳು ಅಧಿಕಾರದಿಂದ ಅಥವಾ ಬಲಾತ್ಕಾರದಿಂದ ಉಂಟಾದ ಪ್ರಕ್ರಿಯೆಯಲ್ಲ. ಹಾಗೆಯೇ ಆದರೆ ಅವರು ಹೇರಿರುವ ಮೌಲ್ಯಗಳು ಏಕ ಮುಖಿಯಾಗಿರಲಿಲ್ಲ.

**ಹೊಸರೀತಿಯ ಸಂಕಥನಗಳು**

೧೮ ನೇ ಶತಮಾನದ ನಂತರ ಯುರೋಪಿನಲ್ಲಿ ಅಧಿಕಾರ ಪರಿಕಲ್ಪನೆ ಬೇರೆಯಾಯಿತು ಎಂದು ಸೈದನ ವಾದ ಇದರಿಂದಲೇ ಹೊಸ ರೀತಿಯ ಸಂಕಥನಗಳು ರೂಪುಗೊಂಡವು. ಎಂದು ಅವನ ಪ್ರತಿಪಾದನೆ. ವಸಾಹತು ಕಾಲದಲ್ಲಿ ಬೇರೆ ಬೇರೆ ನಿರೂಪಣೆಗಳಿದ್ದವು. ಅವುಗಳಿಗೆ ಇದ್ದ ಚಹರೆಗಳು ಭಾರತೀಯರಿಗೆ ಪರಕೀಯವಾಗಿತ್ತು ಎಂಬುದಿಲ್ಲಿ ಉಲ್ಲೇಖನೀಯ. ಆಢಳಿತ ವರ್ಗವು ರೂಪಿಸಿದ ಪರಿಭಾಷೆಗಳು ಅಧಿಕಾರದ ರೂಪಕಗಳೇ ಆಗಿದ್ದವು.

**ಹೊಸ ಸಾಮಾಜಿಕತೆಯ ಉಗಮ**

ಕಾರ್ನವಾಲೀಸ್ ವಾಸ್ತವವಾಗಿ ಅತ್ಯುತ್ತಮ ಆಢಳಿತಗಾರ ಮತ್ತು ಆಢಳಿತ ಕಾರ್ಯಾಂಗದ ಯಂತ್ರವನ್ನು ಶಾಂತಿ ಮತ್ತು ಸೌಹಾರ್ದತೆಯಿಂದ ಕಾಪಾಡಿಕೊಂಡು ಬಂದವನು ಎಂದು ಹೇಳಲಾಗಿದೆ. ಕಾರ್ನವಾಲೀಸ್ ಜಮೀನುದಾರಿ ಪದ್ಧತಿಯನ್ನು ಎತ್ತಿ ಹಿಡಿದ. ಆದರೆ ಮುನ್ರೋನ ರಾಯತ್‌ವಾರಿ ಪದ್ಧತಿಯನ್ನು ಅಳವಡಿಸಿದೆ. ಇವೆರಡೂ ಪಶ್ಚಿಮದ ಕಾನೂನಿನ ಕ್ರಮವನ್ನು ಅಳವಡಿಸಿಕೊಂಡಿದ್ದವು ಹಾಗೂ ಖಾಸಗಿ ಆಸ್ತಿ ಮತ್ತು ಅದರ ಮೇಲಿನ ಅಧಿಕಾರ ಸ್ಥಾಪನೆಯನ್ನು ಹೇಳುತ್ತವೆ. ಮುನ್ರೋ ಮದರಾಸು ಪ್ರಾಂತ್ಯದಲ್ಲಿ ಖಾಸಗಿ ಆಸ್ತಿಯನ್ನು, ಅದರ ಮೇಲೆ ಇರಬೇಕಾದ ಹಕ್ಕು ಬಾಧ್ಯತೆಗಳನ್ನು ಪ್ರತಿಪಾದಿಸಿದ. ಕಾರ್ನವಾಲೀಸ್ ಉದ್ದೇಶವು ಸ್ಪಷ್ಟವಾಗಿತ್ತು. ಅವನು ಇಂಗ್ಲೀಷ್ ಮಾದರಿಯ ಆಡಳಿತ ಮತ್ತು ಭಾರತೀಯ ಸಮಾಜಕ್ಕೆ ಹೊಸ ರೀತಿಯ ನೈತಿಕ ನಿಲುವುಗಳು ಇರಬೇಕೆಂದು ಉದ್ದೇಶಿಸಿದವನು. ಹೊಸ ಸಾಮಾಜಿಕತೆಯ ಉದಯವು ಅವನ ಪ್ರಮುಖ ಗುರಿಯಾಗಿತ್ತು.

**ಹೋಟೆಲ್ ಉದ್ಯಮ**

ಕಾರಂತರು ಸಾರಸ್ವತ ಕುಟುಂಬಗಳಿಗೆ ಸೇರಿದವರಲ್ಲ. ಆದರೆ ಕಾರಂತರ ಮೇಲೆ ದಕ್ಷಿಣ ಕನ್ನಡದ ಸಾಮಾಜಿಕ ಇತಿಹಾಸದ ಪರಿವರ್ತನೆಯ ಅಂಶಗಳಿವೆ. ಕಾರಂತರ ಕಾದಂಬರಿಗಳಲ್ಲಿ ಬರುವ ಕೆಲವು ಉದ್ಯೋಗಗಳು ಈ ದೃಷ್ಟಿಯಿಂದ ಗಮನಾರ್ಹ : ಒಂದು ವಕೀಲ ವೃತ್ತಿ. ಎರಡನೆಯದು – ಉಪಾಧ್ಯಾಯ ವೃತ್ತಿ, ಮೂರನೆಯದು : ಕೃಷಿ.

ನಾಲ್ಕನೆಯದು : ವ್ಯಾಪಾರ. ಇದರಲ್ಲಿ ಹೋಟೇಲು ಉದ್ಯಮಗಳೂ ಸೇರಿವೆ. ಜೀವನೋಪಾಯಕ್ಕಾಗಿ ಈ ಥರದ ಉದ್ಯೋಗಗಳನ್ನು ಕಾರಂತರ ಕಾದಂಬರಿಗಳ ಪುರುಷರು ವಹಿಸಿಕೊಳ್ಳುತ್ತಾರೆ. ಮತ್ತು ಉದ್ಯೋಗಕ್ಕಾಗಿ ವಲಸೆ ಹೋಗುತ್ತಾರೆ. ಕಾರಂತರ ಕಾದಂಬರಿಗಳಲ್ಲಿ ಇಂಗ್ಲೀಷರು : ಅವರ ಜ್ಞಾನ ಪರಂಪರೆ ಬೇರೆ : ಭಾರತೀಯತೆ ಮತ್ತು ಅದರ ಜ್ಞಾನ ಪರಂಪರೆಯು ಬೇರೆಯೆಂಬ ನಿಲುವುಗಳಿಲ್ಲ. ಇದೊಂದು ಗಮನಾರ್ಹವಾದ ಅಂಶವಾಗಿದೆ. ಹೋಟೆಲ್ ಅನ್ನುವುದು ಉದ್ಯಮವಾಗಿರುವ್ಯದು ಚಾರಿತ್ರಿಕ ಬದಲಾವಣೆಯನ್ನು ಸೂಚಿಸುತ್ತದೆ. ಛತ್ರಗಳು; ದೇವಸ್ಥಾನಗಳು; ಜಿಡದಿಗಳು ಹಿಂದಿನ ಕಾಲದಲ್ಲಿ ಪ್ರಯಾಣಿಕ ಆಶ್ರಯದ ಸ್ಥಾನಗಳು, ಮನುಸ್ಮೃತಿಯು ಅನ್ನ ವಿಕ್ರಯಿಸಿ ಮಾರುವ ಬ್ರಾಹ್ಮಣರಿಗೆ ಕಟ್ಟುನಿಟ್ಟಾದ ಎಚ್ಚರಿಕೆಯನ್ನು ನೀಡಿದ. ಕಾರಂತರ ಕಾದಂಬರಿಯ ಮೂಲಕ ಮತ್ತೊಂದು ಚರ್ಚೆ ಎತ್ತಬಹುದು.

■■

# ಗ್ರಂಥ ಋಣ


ಅಕ್ಷರ ಕೆ.ವಿ. : **ರಂಗಪ್ರಪಂಚ** ಅಕ್ಷರ ಪ್ರಕಾಶನ, ಸಾಗರ. ೧೯೯೪.

ಅಗ್ರಹಾರ ಕೃಷ್ಣಮೂರ್ತಿ(ಸಂ): **ಸಂಸ್ಕೃತಿ ಕಥನ** ಕ.ಸ.ಇಲಾಖೆ ಬೆಂಗಳೂರು, ೨೦೦೬.

ಅಶೋಕ ಟಿ.ಪಿ. : **ವಾಸ್ತವತಾವಾದ** ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸಬೆಂಗಳೂರು–೨, ೧೯೯೯.

ಆದ್ಯರಂಗಾಚಾರ್ಯ(ಸಂ) : **ಕನ್ನಡದಲ್ಲಿ ಅರವಿಂದ ದರ್ಶನ** ರಾಜ್ಯ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೭೩.

ಆಮೂರ ಜಿ.ಎಸ್. : **ಕಥನಶಾಸ್ತ್ರ** ಕರ್ನಾಟಕ ಸಾಹಿತ್ಯ ಅಕಾಡೆಮಿ ಜೆ.ಸಿ.ರಸ್ತೆ ಬೆಂಗಳೂರು, ೨೦೦೧.

ಆಶೀಶ್‌ನಂದಿಯವರ: **ಆಯ್ದ ಬರಹಗಳು** ಅಕ್ಷರ ಪ್ರಕಾಶನ ಹೆಗ್ಗೋಡು, ೨೦೦೯.

ಡಾ. ಸುಂಕಾಪುರ ಎಂ.ಎಸ್. (ಪ್ರ.ಸಂ) : **ಶಿಕ್ಷಣವನ್ನು ಕುರಿತು ಶ್ರೀ ಅರವಿಂದರ ಮತ್ತು ತಾಯಿಯವರ ವಿಚಾರಗಳು**ಅನು:ಶ್ರೀಎಲ್.ಜಿ.ಮೊಕ್ತಾಲಿ

ಕನ್ನಡ ಅಧ್ಯಯನ ಪೀಠ, ಮೈಸೂರು, ೧೯೭೫.

ಕನ್ನಡಿಗರಿಬ್ಬರು : **ಸತ್ಯಶೋಧನೆ** ಲೋಕ ಶಿಕ್ಷಣ ಟ್ರಸ್ಟ್, ೨೦೦೧.

ಕಾರ್ಲೋಸ್ ಎಸ್. : **ರಾಚನಿಕವಾದ ಮತ್ತು ನಿರಚನವಾದ** ೨೦೦೦.

ಕಾರ್ಲ್‌ಮಾರ್ಕ್ಸ್ : **ಆಯ್ದ ಕೃತಿಗಳು** ಸಂಪುಟ ೧ ನವಕರ್ನಾಟಕ, ೧೯೮೦.

ಡಾ.ಕಾಶೀನಾಥ ಅಂಬಲಗೆ (ಅನು) : **ಸೌಂದರ್ಯಶಾಸ್ತ್ರ (ಕಲಾತ್ಮಕ ವಿವೇಚನೆ)**

(ಕಲೆಯ ಸ್ನಾತಕ, ಸ್ನಾತಕೋತ್ತರ ಹಾಗೂ ಡಿಪ್ಲೊಮಾ ಪಠ್ಯಕ್ರಮಗಳ ಪ್ರಕಾರ) ಮೂಲ ಹಿಂದಿ: ಡಾ.ಮಮತಾ ಚತುರ್ವೇದಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

ಕೆ.ಕೃಷ್ಣಮೂರ್ತಿ : **ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ** ಕ.ಸ.ನಿರ್ದೇಶನಾಲಯ ಬೆಂಗಳೂರು, ೧೯೯೦.

ಎಂ.ಎ.ಕೃಷ್ಣಸ್ವಾಮಿ : **ಋಗ್ವೇದ** ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕ ಮಾಲೆ – ೩೪, ೧೯೫೫.

ಕೇಶವಶರ್ಮ .ಕೆ. : **ಶಬ್ದರೇಖೆ** ಅಭಿನವ ಬೆಂಗಳೂರು, ೧೯೯೮.

ಬಿ.ಡಿ.ಗಣಪತಿ : **ಸತ್ಯಶೋಧನೆ** ಜ್ಯೋತಿ ಪ್ರಕಾಶನ ಮಡಿಕೇರಿ, ೧೯೭೪.

ಗ.ಪ್ರ.ಪ್ರಧಾನ : **ಸ್ವಾತಂತ್ರ್ಯ ಸಂಗ್ರಾಮದ ಮಹಾಭಾರತ**

ಸರಸ್ವತೀ ರಿಸಬೂಡ(ಅನು) ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೯೪.

ಗಾಂಧಿ : **ಹಿಂದ್ ಸ್ವರಾಜ್ಯ** ಗಾಂಧಿ ಸ್ಮಾರಕ ನಿಧಿ ಗಾಂಧಿ ಭವನ, ಕುಮಾರ ಪಾರ್ಕ್‌ಪೂರ್ವ, ಬೆಂಗಳೂರು–೧, ೨೦೦೮.

ಗಿರಡ್ಡಿ ಗೋವಿಂದರಾಜ : **ಸಾತತ್ಯ** ಸ್ನೇಹ ಪ್ರಕಾಶನ ವಿಜಯನಗರ ೨ನೆಯ ಹಂತ ಬೆಂಗಳೂರು, ೧೯೯೨.

ಗಿರಡ್ಡಿ ಗೋವಿಂದರಾಜ : **ಸಾಹಿತ್ಯ ಮತ್ತು ಪರಂಪರೆ** ಅಭಿಜಾತ ಗ್ರಂಥಮಾಲೆ ಬೆಂಗಳೂರು, ೧೯೮೧.

ಡಾ.ಗಿರಡ್ಡಿ ಗೋವಿಂದರಾಜ : **ಪ್ರಮಾಣ** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೭.

ಗೊರೂರು ರಾಮಸ್ವಾಮಿ ಅಯ್ಯಂಗಾರ್ : **ನನ್ನ ಸತ್ಯಾನ್ವೇಷಣೆ** ನವಜೀವನ ಪ್ರಕಾಶನ ಮಂದಿರ, ಅಹಮದಾಬಾದ್, ೧೯೯೯.

ವಿ.ಕೃ.ಗೋಕಾಕ್ : **ನವ್ಯತೆ** ಸುರುಚಿ ಪ್ರಕಾಶನ ಮೈಸೂರು, ೧೯೭೫.

ಜಿ.ಎಸ್.ಚಕ್ರವರ್ತಿ: **ಇತಿಹಾಸ ಪ್ರದೀಪ** ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೩.

ಜಾ.ಗೋ. : **ಕಾವ್ಯಮಂಥನ** ಪ್ರಾಯೋಗಿಕ ವಿಮರ್ಶೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೦.

ಡಿ.ವಿ.ಜಿ. : **ವೃತ್ತಪತ್ರಿಕೆ** ಕಾವ್ಯಾಲಯ, ಮೈಸೂರು, ೧೯೬೮.

ಡಿ.ವಿ.ಜಿ.: **ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮಯೋಗ** ಕಾವ್ಯಾಲಯ, ಮೈಸೂರು-೧೪, ೧೯೯೬.

ಎಚ್.ತಿಪ್ಪೇರುದ್ರಸ್ವಾಮಿ: **ಕನ್ನಡ ವಿಮರ್ಶೆ ಕವಲುದಾರಿಯಲ್ಲಿ** ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೮.

ಡಾ.ಎಚ್. ತಿಪ್ಪೇರುದ್ರಸ್ವಾಮಿ (ಸಂ): **ಮಹಾತ್ಮ** ಅನು: ಕೆ.ಎಸ್.ನಾರಾಯಣಸ್ವಾಮಿ

ಗಾಂಧೀಭವನ ಬಿ.ಆರ್.ಪ್ರಾಣೇಶರಾವ್ ಮಾನಸಗಂಗೋತ್ರಿ ಶಶಿಕಲಾಚಂದ್ರಶೇಖರ್ ಮೈಸೂರು, ೧೯೭೫.

ತೀ.ನಂ.ಶ್ರೀಕಂಠಯ್ಯ: **ಭಾರತೀಯ ಕಾವ್ಯ ಮೀಮಾಂಸೆ** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

ಎಚ್.ದಂಡಪ್ಪ, ಬಿ.ಎನ್.ಸುಮಿತ್ರಬಾಯಿ : **ಸುವರ್ಣ ಸಾಹಿತ್ಯ ವಿಮರ್ಶೆ** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

ದ.ರಾ.ಬೇಂದ್ರೆ: **ಮಾತೆಲ್ಲ ಜ್ಯೋತಿ** ಅಕಾಡೆಮಿ ಆಫ್ ಜನರಲ್ ಎಜುಕೇಶನ್, ಮಣಿಪಾಲ, ೧೯೭೨.

ದೇ.ಜವರೇಗೌಡ : **ರಾಷ್ಟ್ರಕವಿ ಕುವೆಂಪು** ಕ.ಸ.ನಿರ್ದೇಶನಾಲಯ, ೧೯೮೫.

ಜಿ.ಟಿ.ದೇಶಪಾಂಡೆ(ಮೂ) : **ಅಭಿನವಗುಪ್ತ** ಎನ್.ಬಾಲಸುಬ್ರಹ್ಮಣ್ಯ(ಅನು) ಸಾಹಿತ್ಯ ಅಕಾಡೆಮಿ, ೨೦೦೦.

ಡಾ.ಧನ್ಯಕುಮಾರ್ ಇಜಾರಿ: **ಆಯುರ್ವೇದ ವಿಜ್ಞಾನ** ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿ.ವಿ, ಧಾರವಾಡ, ೧೯೭೦.

ಇ.ಎಂ.ಎಸ್.ನಂಬೂದಿರಿಪಾಡ್: **ಮಾರ್ಕ್ಸ್‌ವಾದ ಮತ್ತು ಸೌಂದರ್ಯಶಾಸ್ತ್ರ** ಭಾಸ್ಕರಮಯ್ಯ(ಅನು) ಜನವಾದಿ ಪ್ರಕಾಶನ, ಗುಂಡ್ಮಿ, ೨೦೦೦.

ಎಸ್.ನಟರಾಜ್. ಬೂದಾಳ್ : **ನಾಗಾರ್ಜುನನ ಮೂಲ ಮಾಧ್ಯಮಕ** ಅಭಿನವ, ಬೆಂಗಳೂರು, ೨೦೦೬.

ಎಂ.ಎಸ್.ನರಸಿಂಹಮೂರ್ತಿ: **ಭಾರತೀಯ ನಾಟಕ ಪರಂಪರೆ** ಬೆಂಗಳೂರು ವಿಶ್ವವಿದ್ಯಾನಿಲಯ ಬೆಂಗಳೂರು, ೧೯೮೫.

ನರಹಳ್ಳಿ ಬಾಲಸುಬ್ರಹ್ಮಣ್ಯ : **ನವ್ಯತೆ** ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ ಜೆ.ಸಿ.ರಸ್ತೆ, ಬೆಂಗಳೂರು, ೧೯೯೯.

ಡಿ.ಎಸ್.ನಾಗಭೂಷಣ: **ಕುವೆಂಪು ಸಾಹಿತ್ಯ ದರ್ಶನ** ಪ್ರಗತಿ ಗ್ರಾಫಿಕ್ಸ್ ೧೧೯, ೩ನೆಯ ತಿರುವು, ೮ ನೆಯ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು, ೨೦೦೭.

ಹಾ.ಮಾ.ನಾಗಾರ್ಜುನ: **ಛಂದೋ ಅಧ್ಯಯನ** ರಾಸಿ ಪುಸ್ತಕ ಪ್ರಕಾಶನ ೮೩/೧ಎ, ಕೆ.ಎಸ್.ಆರ್.ಟಿ.ಸಿ ಬಡಾವಣೆ, ಬನ್ನಿಮಂಟಪ, ಮೈಸೂರು, ೨೦೦೮.

ನಾಡೋಡಿ : **ವಿನೋಬಾ ಅಣಿಮುತ್ತುಗಳು** ಮತ್ತೂರು ಕೃಷ್ಣಮೂರ್ತಿ ವಾಹಿನಿ ಪ್ರಕಾಶನ, ಮದರಾಸು, ೧೯೫೭.

ನಾಯಕ ಜಿ.ಎಚ್. : **ಕೃತಿಸಾಕ್ಷಿ** ಕ.ಸ.ಇಲಾಖೆ ಬೆಂಗಳೂರು, ೨೦೦೬.

ನಾರಾಯಣ ಕೆ.ವಿ.: **ತೊಂಡುಮೇವು(೯ ಕಂತೆ)**ಬರಹ ಪಬ್ಲಿಷಿಂಗ್ ಹೌಸ್, ೨೦೧೦.

ಪಂಡಿತ ಮುಳಿಯ ತಿಮ್ಮಪ್ಪಯ್ಯ : **ಕನ್ನಡ ನಾಡು ದೇಸಿ ಸಾಹಿತ್ಯವೂ**

ಕೀ.ಶೇ: ಪಂಡಿತ ಮುಳಿಯತಿಮ್ಮಪ್ಪಯ್ಯನವರು, ಕನ್ನಡ ಸಂಶೋಧನ ಸಂಸ್ಥೆ ಧಾರವಾಡ, ೧೯೫೪.

ಡಾ. ಪಾಂಡುರಂಗ ವಾಮನ ಕಾಣೆ : **ಧರ್ಮಶಾಸ್ತ್ರದ ಇತಿಹಾಸ** (ಸಂಪುಟ೧:ಭಾಗ೨) ಅನು:ಪ್ರೊ.ಎಸ್.ಕೆ.ರಾಮಚಂದ್ರರಾವ್, ಎನ್.ಎಸ್.ಶಾರದಾ ಪ್ರಸಾದ್ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು.

ಪಾದೇಕಲ್ಲು ನರಸಿಂಹಭಟ್: **ಅಭಿನವಗುಪ್ತ** ಅಕ್ಷರ ಚಿಂತನ, ೧೯೯೮.

ಡಾ. ಪ್ರಭಾಕರ ಜೋಶಿ ಎಂ.: **ಭಾರತೀಯ ತತ್ತ್ವಶಾಸ್ತ್ರ ಪ್ರವೇಶ** ಎಂ.ಎ.ಹೆಗಡೆ ಸಿದ್ದಾಪುರ ಅಕ್ಷರ ಪ್ರಕಾಶನ, ಸಾಗರ, ೨೦೦೮.

ಪ್ರಸನ್ನ : **ನಟನೆಯ ಪಾಠಗಳು** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೭.

ಬರಗೂರು ರಾಮಚಂದ್ರಪ್ಪ: **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨, ೧೯೯೩.

ಬರಗೂರು ರಾಮಚಂದ್ರಪ್ಪ : **ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ** ಕ.ಸಾ.ಅಕಾಡೆಮಿ, ಬೆಂಗಳೂರು-೨, ೧೯೯೩.

ಬಸವರಾಜ ಕಲ್ಗುಡಿ: **ಸುವರ್ಣವಿಚಾರ ಸಾಹಿತ್ಯ** ಕ.ಸ. ಇಲಾಖೆ, ಬೆಂಗಳೂರು, ೨೦೦೬.

ಬಸವರಾಜ ನಾಯ್ಕರ: **ಅಸಂಗತ** ಕ.ಸಾ.ಅಕಾಡೆಮಿ, ಬೆಂಗಳೂರು. ೨೦೦೨.

ಬಾಲಗಂಗಾಧರ ಎಸ್.ಎನ್. (ಮೂಲ) : **ಸ್ಮೃತಿ–ವಿಸ್ಮೃತಿ:ಭಾರತೀಯ ಸಂಸ್ಕೃತಿ** ರಾಜಾರಾಮ ಹೆಗಡೆ (ಅನು) ಅಕ್ಷರ ಪ್ರಕಾಶನ, ಸಾಗರ, ೨೦೧೦.

ಬಾಲಸುಬ್ರಹ್ಮಣ್ಯ ಎನ್.: **ಅರಿಸ್ಟಾಟಲನ ಕಾವ್ಯಮೀಮಾಂಸೆ** ಕಾವ್ಯಾಲಯ ಪ್ರಕಾಶಕರು ಮೈಸೂರು, ೧೯೭೨.

ಬಾಲಸುಬ್ರಹ್ಮಣ್ಯ ಎನ್.: **ವೇದಾಂತಸಾರ** ಕಾವ್ಯಾಲಯ, ಮೈಸೂರು, ೧೯೭೩.

ಬಿಪಿನ್ ಚಂದ್ರ : **ಸ್ವಾತಂತ್ರ್ಯದ ಹೋರಾಟ** ಆರ್.ಎಲ್.ಅನಂತರಾಮಯ್ಯ(ಅನು) ನ್ಯಾಶನಲ್ ಬುಕ್ ಟ್ರಸ್ಟ್, ೨೦೦೧.

ಬಿಮಲ್‌ಕೃಷ್ಣಮತಿಲಾಲ್: **ಶಬ್ದ ಮತ್ತು ಜಗತ್ತು** ಅಕ್ಷರ ಪ್ರಕಾಶನ ಸಾಗರ, ೨೦೧೦.

ಮಮತಾ ಬ್ಯಾನರ್ಜಿ: **ಸೌಂದರ್ಯಶಾಸ್ತ್ರ** ಕರ್ನಾಟಕ ಲಲಿತಕಲಾ ಅಕಾಡೆಮಿ.

ಮಲ್ಲೇಪುರಂ.ಜಿ.ವೆಂಕಟೇಶ್: **ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೦.

ಡಾ.ಮಹದೇವ ನಾರಾಯಣರಾವ್ ಜೋಶಿ : **ಋಗ್ವೇದ ಸೂತ್ರ ಮಂಜರಿ** ರೂಪ ಪ್ರಕಾಶನ ಧಾರವಾಡ, ೨೦೦೭.

ಮಹಾತ್ಮಾಗಾಂಧಿ **ಧರ್ಮ ಮತ್ತು ನೀತಿ** ಗಾಂಧೀ ಸ್ಮಾರಕ ನಿಧಿ ೧೯೫೮.

ಎನ್.ಜಿ. ಮಹಾದೇವಪ್ಪ : **ತರ್ಕಶಾಸ್ತ್ರ–೧** ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ, ೧೯೭೧.

ಡಾ.ಮಹೇಶ ಅಡಕೋಳಿ (ಸಂ): ವಿದ್ವಾನ್‌ಶಂಕರಭಟ್ಟ **ಅನ್ನಂಭಟ್ಟ ವಿರಚಿತ ತರ್ಕ ಸಂಗ್ರಹ** (ಅನುವಾದ ಟಿಪ್ಪಣಿ ಸಹಿತ) ಆನಂದ ಪ್ರಕಾಶನ ಮೂರೂರು, ೧೯೯೨.

ಮುಳಿಯ ತಿಮ್ಮಪ್ಪಯ್ಯ: **ಸಮಗ್ರ ಸಾಹಿತ್ಯ(ಸಂ ೨)**ಮುಳಿಯ ಮಹಾಬಲಭಟ್(ಸಂ) ಮುಳಿಯ ತಿಮ್ಮಪ್ಪಯ್ಯ ಶತಮಾನೋತ್ಸವ ಸಮಿತಿ ಮಂಗಳೂರು, ೧೯೯೭.

ಮುಳಿಯ ತಿಮ್ಮಪ್ಪಯ್ಯ: **ನಾಡೋಜ ಪಂಪ** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಭವನ, ಬೆಂಗಳೂರು, ೨೦೦೬.

ಮೋಹನ್‌ದಾಸ್ ಕರಮಚಂದ್ ಗಾಂಧಿ : **ಜೀವನ ಶಿಕ್ಷಣ** ಗಾಂಧೀ ಸ್ಮಾರಕ ನಿಧಿ ಕರ್ನಾಟಕ ಶಾಖೆ, ೧೯೬೬.

ಮೋಹನ್‌ದಾಸ್ ಕರಮಚಂದ್ ಗಾಂಧಿ : **ಹಿಂದ್ ಸ್ವರಾಜ್ಯ** ಇಳಾ ಮುದ್ರಣ, ನಂ: ೩೬ ೪೦ ಅಡಿರಸ್ತೆ, ರಾಘವನಗರ, ಬೆಂಗಳೂರು–೨೬, ೨೦೦೮.

ಯೆರವಿನ ತೆಲಿಮಠ ಸಿ.ಆರ್.: **ಸಾಹಿತ್ಯ ವಿಮರ್ಶೆಯ ಮಾದರಿಗಳು** ಕನ್ನಡ ವಿಶ್ವವಿದ್ಯಾನಿಲಯ, ೨೦೦೮

ರಂಗನಾಥ ಎನ್.: **ಭರ್ತೃಹರಿಯ ವಾಕ್ಯಪದೀಯ** ಶರ್ಮ(ಅನು) ಅಕ್ಷರ ಪ್ರಕಾಶನ, ಹೆಗ್ಗೋಡು ಡಿ.ಆರ್.ನಾಗಾರಾಜ್(ಸಂ)ಸಾಗರ, ೧೯೯೩.

ರಂಗೋ ಕುಲಕರ್ಣಿ : **ಯೋಗವಾಸಿಷ್ಠ** ಸಂ.ದಿ.ನಾಗೇಶ ಪ್ರಕಾಶಕರು ಪ್ರತಿಭಾ ಗ್ರಂಥಮಾಲೆ ಶಿವಾಜಿ ಬೀದಿ, ಧಾರವಾಡ.

ದಿವಾಕರ ರಂ.ರಾ.: **ಸತ್ಯಾಗ್ರಹ** ಕ.ಸ.ನಿರ್ದೇಶನಾಲಯ ನೃಪತುಂಗ ರಸ್ತೆ, ಬೆಂಗಳೂರು, ೧೯೮೫.

ರಹಮತ್ ತರೀಕೆರೆ: **ಕನ್ನಡ ಸಾಹಿತ್ಯ ಮೀಮಾಂಸೆ**(ಸಂ.೧) ಪ್ರಸಾರಾಂಗ, ಹಂಪಿ, ೨೦೦೧.

ರಾಘವಾಚಾರ್ ಕ.ವೆಂ.: **ನಂದಾನೆನಪು** ಉಷಾ ಸಾಹಿತ್ಯ ಮಾಲೆ ಮೈಸೂರು–೧, ೧೯೭೩.

ರಾಘವಾಚಾರ ಕ.ವೆಂ.: **ಸೋಫೊಕ್ಲಿಸ್ ಮಹಾಕವಿಯ ಎಲೆಕ್ಟ್** ಫಿಲಕ್ತೇತೇಸ್ ಉಷಾ ಸಾಹಿತ್ಯ ಮಾಲೆ ಮೈಸೂರು–೧, ೧೯೭೪.

ರಾಚಪ್ಪ ಟಿ.ವಿ. : **ಕರ್ಮ ನಿಯಮ**
(Translation of 'karma' and 'A study in karma' by Anniebesant and a few extracts from C.W. Lead Beaters works) ಅನು: ಟಿ.ವಿ.ರಾಚಪ್ಪ ಕರ್ನಾಟಕ ಥಿಯಾಸಫಿಕರ್ ಫೆಡರೇಷನ್ ರಿಟೈರ್ಡ್ ಹೈಸ್ಕೂಲು ಹೆಡ್ಮಾಸ್ಟರ್ ಬೆಂಗಳೂರು–೫೬೦೦೦೪.

ರಾಜೇಂದ್ರ ಚೆನ್ನಿ: **ಅಮೂರ್ತತೆ ಮತ್ತು ಪರಿಸರ** ಅಭಿನವ ಪ್ರಕಾಶನ, ೫೮, ಮಹಡಿ, ೫ನೆಯ ಎ ಅಡ್ಡರಸ್ತೆ, ಸುಬ್ಬಣ್ಣಗಾರ್ಡನ್, ಬೆಂಗಳೂರು, ೨೦೦೩.

ರಾಜೇಂದ್ರ ಚೆನ್ನಿ: **ದೇಶೀವಾದ** ಕ.ಸಾ.ಅಕಾಡೆಮಿ ಬೆಂಗಳೂರು, ೧೯೯೯.

ರಾಜೇಂದ್ರ ಚೆನ್ನಿ: **ನಡುಹಗಲಿನಲ್ಲಿ ಕಂದೀಲುಗಳು** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೪.

ರಾನಡೆ ರಾ.ದ. ಮೂಲ:: **ಬ್ರಹ್ಮಸೂತ್ರಗಳು** ಅ.ರಾ.ಸೇ. ಶ್ರೀ ಶಂಕರಲಿಂಗ ಪ್ರಕಾಶನ ಭರಮಸಾಗರ–೫೭೭೫೧೯, ೧೯೮೮.

ರಾಮಚಂದ್ರನ್ ಸಿ.ಎನ್.: **ಸಾಹಿತ್ಯ ವಿಮರ್ಶೆ** ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು-೨, ೨೦೦೨.

ರಾಮಚಂದ್ರನ್ ಸಿ.ಎನ್.: **ವಸಾಹತೋತ್ತರ ಚಿಂತನೆ** ಕ.ಸಾ.ಅಕಾಡೆಮಿ, ಬೆಂಗಳೂರು, ೨೦೦೨.

ಡಿ.ಲಿಂಗಯ್ಯ : **ಶಿವಪುರದ ಧ್ವಜ ಸತ್ಯಾಗ್ರಹ** ಶಿವಪುರ ಧ್ವಜ ಸತ್ಯಾಗ್ರಹ ಟ್ರಸ್ಟ್, ೧೯೭೫. ಲೂಯಿ ರೈಸ (ಸಂ) : **ಅಮರಕೋಶ (ಅಮರಸಿಂಹನ)**

ಪ್ರೊ.ಎನ್.ಬಾಲಸುಬ್ರಹ್ಮಣ್ಯ, ಪರಿಷ್ಕೃತ ಸಂಸ್ಕರಣ, ಪ್ರಸಾರಾಂಗ, ಮೈಸೂರು, ೨೦೦೬.

ಲೆನಿನ್ ವಿ.ಐ.: **ಲೆನಿನ್ ಆಯ್ದ ಕೃತಿಗಳು** ಸಂಪುಟ.೩, ಸಂಪುಟ ೨ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೮, ೧೯೮೯.

ಪ್ರೊ. ವೆಂಕಟಸುಬ್ಬಯ್ಯ ಜಿ.: **ಎರವಲು ಪದಕೋಶ** ನವಕರ್ನಾಟಕ ಪಬ್ಲಿಕೇಶನ್, ೧೯೯೮.

ಪ್ರೊ. ವೆಂಕಟಸುಬ್ಬಯ್ಯ ಜಿ.: **ಇಗೋ ಕನ್ನಡ** ನವಕರ್ನಾಟಕ ಪ್ರಕಾಶನ, ೧೯೯೭.

ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ : **ಮಹಾಕಾವ್ಯ** ಡಿ.ವಿ.ಕೆ.ಮೂರ್ತಿ ಮೈಸೂರು-೪, ೨೦೦೧.

ಡಿ.ಎನ್.ಶಂಕರಭಟ್ : **ಇಂಗ್ಲಿಷ್ ಪದಗಳಿಗೆ ಕನ್ನಡದ್ದೇ ಪದಗಳು** ಬಾಶಾ ಪ್ರಕಾಶನ ಹೆಗ್ಗೋಡು, ಸಾಗರ, ೨೦೦೮.

ಡಾ.ಜಿ.ಎಸ್.ಶಿವರುದ್ರಪ್ಪ : **ಕಾವ್ಯಾರ್ಥ ಚಿಂತನ** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೮೩.

ಜಿ.ಎಸ್.ಶಿವರುದ್ರಪ್ಪ : **ಕಾವ್ಯಾರ್ಥ ಪದಕೋಶ** ಕೆ.ವಿ.ನಾರಾಯಣ ಕಾಮಧೇನು ಪ್ರಕಾಶನ, ಬೆಂಗಳೂರು, ೧೯೯೯.

ಜಿ.ಎಸ್.ಶಿವರುದ್ರಪ್ಪ : **ಕನ್ನಡ ಸಾಹಿತ್ಯ ಸಮೀಕ್ಷೆ** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೧೯೯೯.

ಜಿ.ಎಸ್.ಶಿವರುದ್ರಪ್ಪ : **ಟಿ.ಎಸ್.ಎಲಿಯಟ್ ಮತ್ತು ಕನ್ನಡ ನವ್ಯ ಕಾವ್ಯಸಂದರ್ಭ** ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೮೯.

ಶಿವಾರೆಡ್ಡಿ .ಕೆ.ಸಿ.: ಕುವೆಂಪು ಸಮಗ್ರ ಗದ್ಯ ೧ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೩.

ಶಿವಾರೆಡ್ಡಿ ಕೆ.ಸಿ. : ಕುವೆಂಪು ಸಮಗ್ರ ಗದ್ಯ-೨ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೪.

ಎಲ್.ಎಸ್.ಶೇಷಗಿರಿರಾವ್: **ಪಾಶ್ಚಾತ್ಯ ಮತ್ತು ಭಾರತೀಯ ಮಹಾಕಾವ್ಯ ಪರಂಪರೆಗಳ ಮನೋಧರ್ಮ** ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು-೫೬.

ಡಾ.ಶ್ರೀಧರಹೆಗಡೆ ಭದ್ರನ್ : ಆಧುನಿಕ ಕನ್ನಡ ಮಹಾಕಾವ್ಯ ಅಭಿನವ ೧೭/೧೮-೨ ಮೊದಲನೆ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-೪೦.

ಶ್ರೀಮನ್ ನಾರಾಯಣ : **ಮಹಾತ್ಮಗಾಂಧಿಯವರ ಆಯ್ದ ಕೃತಿಗಳು(೩)**ನವಜೀವನ ಪ್ರಕಾಶನ ಮಂದಿರ, ಅಹಮದಾಬಾದ್, ೨೦೦೧.

ಶ್ರೀರಂಗ : **ನಾಟ್ಯಶಾಸ್ತ್ರದ ಅಧ್ಯಾಯ ಸಂಗ್ರಹ** ಅಕ್ಷರ ಪ್ರಕಾಶನ, ಸಾಗರ, ೧೯೮೩.

ಶ್ರೀರಂಗ ಮಹಾಗುರು: **ಅಮರವಾಣೀ ಅಷ್ಟಾಂಗ ಯೋಗಮಂದಿರ** ೯೫೭, ಶೇಷಾದ್ರಿ ಅಯ್ಯರ್ ರಸ್ತೆ, ಮೈಸೂರು, ೧೯೯೭.

ಸಂಪದ್ಗಿರಿರಾವ್ (ಅಧ್ಯಕ್ಷರು) : **ಕರ್ನಾಟಕದ ಪರಂಪರೆ(ಸಂ.೨)** ಮೈಸೂರು ರಾಜ್ಯ ಸರ್ಕಾರ, ೧೯೭೦.

ರಾಮಚಂದ್ರರಾವ್ ಸಾ.ಕೃ.: **ಆಯುರ್ವೇದದಲ್ಲಿ ನಾಡೀ ವಿಜ್ಞಾನ** ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೪.

ಸುಂಕಾಪುರ ಎಂ.ಎಸ್. : **ಅರವಿಂದರ ಶಿಕ್ಷಣ ವಿಚಾರ** ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೫.

ಸುಕುಮಾರ್ ಅಮ್ಮಿಕೋಡ್: **ತತ್ವಮಸಿ** ವಿ.ಗೋಪಾಲಕೃಷ್ಣ(ಅನು) ಸಾಹಿತ್ಯ ಅಕಾಡೆಮಿ, ೨೦೦೫.

ಸುನಿಲ್ ಸಹಸ್ರಬುಧೆ : **ಆಧುನಿಕ ವಿಜ್ಞಾನಕ್ಕೆ ಗಾಂಧಿಯ ಸವಾಲು** ಕೆ.ಪುಟ್ಟಸ್ವಾಮಿ (ಅನು) ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು-೧೮, ೨೦೦೩.

ಸುಬ್ಬಣ್ಣ ಕೆ.ವಿ.: **ಅರೆ ಶತಮಾನದ ಅಲೆ ಬರಹಗಳು** (ಸಂ: ಟಿ.ಪಿ.ಅಶೋಕ) ಅಕ್ಷರ ಪ್ರಕಾಶನ, ಸಾಗರ, ೨೦೦೪.

ಸುಬ್ಬಣ್ಣ ಕೆ.ವಿ. : **ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೦.

ಸುಬ್ಬಣ್ಣ ಕೆ.ವಿ. (ಅನು): **ಸ್ವರಾಜ್ಯದ ಹಾದಿ ಹೆಜ್ಜೆಗಳು** ಕರ್ನಾಟಕ ಸಂಘ, ಪುತ್ತೂರು. ೧೯೯೮.

ಸುಮಿತ್ರ.ಎಲ್.ಸಿ. : **ಕಾಡು-ಕಡಲು** ಶಿವರಾಮ ಕಾರಂತ ಅಧ್ಯಯನ ಕೇಂದ್ರ ವಿವೇಕಾನಂದ ಕಾಲೇಜು, ಪುತ್ತೂರು-೫೭೪೨೦೩, ೨೦೦೨.

ಸುರೇಂದ್ರನಾಥ್ ಮಿಣಜಗಿ: **ಸೃಜನ ಕ್ರಿಯೆ ಮತ್ತು ಸಂವೇದನೆ** ಅಂಕಿತ ಪುಸ್ತಕ ಬೆಂಗಳೂರು, ೨೦೦೦.

ಸೋಮನಾಥಾನಂದ : **ಉಪನಿಷತ್ ಭಾವಧಾರೆ** ಶ್ರೀ ರಾಮಕೃಷ್ಣಾಶ್ರಮ ಮೈಸೂರು-೫೭೦೦೨೦, ೧೯೭೦.

ಸ್ವಾಮಿ ಆದಿದೇವಾನಂದ: **ಪಾತಂಜಲಿಯೋಗ ದರ್ಶನ** ಶ್ರೀ ರಾಮಕೃಷ್ಣಾಶ್ರಮಮೈಸೂರು-೨, ೧೯೮೧.

ಹರಿದಾಸ ಭಟ್ಟಚಾರ್ಯ : **ಯುಗಯಾತ್ರಿ ಭಾರತೀಯ ಸಂಸ್ಕೃತಿ**(ಸಂ.೩) ಪ್ರಸಾರಾಂಗಮೈಸೂರು ವಿಶ್ವವಿದ್ಯಾನಿಲಯ, ೧೯೭೫.

ಡಾ.ಹಾ.ಮಾ.ನಾಯಕ (ಸಂ) : **ಭಾರತೀಯ ತತ್ತ್ವಶಾಸ್ತ್ರದ ಮೂಲಾಂಶಗಳು** ಕ.ಅ.ಸಂಸ್ಥೆ ಮೈಸೂರು, ೧೯೭೧.

ಡಾ.ಹಾ.ಮಾ.ನಾಯಕ (ಸಂ): **ಭಾರತೀಯ ತತ್ತ್ವಶಾಸ್ತ್ರದ ರೂಪುರೇಷೆಗಳು**

ಮೂಲ: ಎಂ.ಹಿರಿಯಣ್ಣ ಕನ್ನಡ ಅಧ್ಯಯನ ಸಂಸ್ಥೆ ಅನು: ಡಾ.ಪ್ರಭುಶಂಕರ, ಮೈಸೂರು, ೧೯೭೩.

ಹಿಪ್ಪರಗಿ ಜಿ.ಸಿ. : **ವಿಚಾರಮಯೂರ** **ಪಂಪಾ** ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೮೨.

ಹೆಗಡೆ ಎಂ.ಎ.: **ಅಲಂಕಾರತತ್ತ್ವ** ಸಮಾಜ ಪುಸ್ತಕಾಲಯ, ಧಾರವಾಡ, ೨೦೦೧.

# REFERENCE

Abrahams M.H. : **A Glossary of Literary terms** Harcourt College Publishers, 1985.

Andrew Edgar : **Key concepts in Cultural theory** Routledge Newyork, 1999.

Anand Prakash: **Marxist Literary theory** A View. Worldview Publications, 2002.

Antony Easthope: **Poetry as discourse** methurn London, 1983.

Alan Swingwood: **Sociological Poetics and Aesthetic theory** Macmillan Press London, 1986.

Acharya Vipin : **Kamasutra** Chandra Bandhu universal Publications, Delhi-6, 1973.

Altekar A. S. : **State and Governmentin Ancient India**

Motilal Banarasidas, Varanasi, 1972.

Altekar A.S. : **The Position of Women in Hindu Civilisation** Motilal Banarasidas Delhi patna, Varnasi, 1962.

Apte V.M.S. :**The Practical Sanskrit – English Dictionary** Motilal Banarasidas, New Delhi, 1965.

Apte V.M. : **Social & Religious Life in the Grihya Sutras** Popular Book Depot, Bombay, 1954.

Arora Rajkumar : **Historical & Cultural Data From Bhavisya Purana** Sterling Publishers Private Limited New Delhi, 1972.

Bill Asheroft : **Key concepts in post colonial studies** Routledge, 2004.

Bijay Kumar das : **Twentieth Century Literary Criticism** Atlantic, 2005.

Bhaktin M.M. : **The dialogic Imagination** University of Texas Press, Austin, 1981.

Basham A.L.: **The Wonder that was India** Sidgwick and Jackson, London, 1967.

Basham A.L. (Ed) : **A Cultural History of India** Clarendon Press, Oxford, 1975.

Bronislaw Malinowski : **Sex & Repression in Savage** Society Kegan Paul, London, 1927.

Bhattacharya Narendranath : **Ancient Indian Ritual and their Social Content** Manohar Book Service Panna Bhawan Delhi, 1975.

Candra Cakravati : **Sex Life in Ancient India** Firms Mukhyopadyaya K.L. Calcutta, 1963.

Coomara Swamy, Anand : **Dance of Shiva** Asia Publishing House, Bombay, 1968.

David Punter : **Post colonial imaginings** Atlantic London, 2000.

Devi G.N. : **Indian Literary Criticism** Orient Hongman, 2007.

Diana Collinson : **Fifty Eastern Thinkers** Routledge key gudes, 1999.

Debi Prasad Chattopadyaya : Lokayata Peiples Publishing House, New Delhi, 1981.

Dilip Kumar Ganguly: **Aspects of Ancient Indian Administration** AbhinavPublications New Delhi, 1979.

Durkhein .E. : **Suicide** Routledge and Kegan Paul London, 1970.

Dikshit G. S.: **Local Self Government in Medival Karnataka** Karnataka University Dharwad, 1974.

Elizabeth Freud : **The return of Reader: Reader** Reshonseenherm – Methurn, 1987.

Fredrich Nietzsche : **The Use and Abuse of history** Twhiberal Arts Press, 1957.

Frantz Fanon : **Wretehed of Earth,** 1990.

Fredric Jameson : **Marxism and form** Princeton New Jersy, 1974.

Freud Sigmund : **The interpretation of Dreams Science** Edition, INC, New York, 1961.

Geddes & Grosset: **Dictionary of Art** Geddes & Grosset, 1999.

Ganapathi S.V: **Samaveda 143** kalakhetra colony Madras-90, 1982.

Gururajachar S. : **Some aspect of economic & Social Life in Karnataka** Prasaranga University of Mysore Mysore, 1974.

Hawkes Terence : **Structuralism & Semoitics** TheChaucer Press Limited, Great Britain, 1985.

Homi.K.Bhabha : **The Location of Culture** Routledge London and New York, 1994.

Homi.K.Bhabha : **Nation and Narration** Routledge London and New York, 1990.

Jeremy Hawthorn : **A Glossary of contemporary literary theory** Arnold – London, 2000.

Julian wolfreys : **Key concepts in literary theory** Atlantic Publishers Edinburg, 2002.

Jascue .V. Harari (Ed): **Textual Strategies** Methurn, 1979.

John Greimes : **A concise Dict of Indian Philosophy** Stats University of New York press, 1996.

James Strachey Sigmund Freud : **The interpretation of Madras** Science Editions INC Newyork, 1961.

Jack Goody (Ed) : **The Character of Kinship** Cambridge University Press, Cambridge, 1973.

Jack Goody and Tambiah S.J. : **Bride wealth & Dowry** Cambridge University Press, Cambridge, 1973.

James Hastings: (Ed): **Encyclopedia Religion & Ethics (Vol-5)–(Vol-10)**TanirChark38 Georgestar, 1967.

Jack Goody : **Production and Reproduction** Cambridge University Press Cambridge, 1976.

Kala Acharya : **Indian Philosophical terms** Somaiya Publications New Delhi, 2004.

Kumkum Roy(Ed:) : **Woman in Easy Indian Societies** Manohar, 2001.

Kangle R.P. : **The Kautilya Arthashastra (Part 1 & 2)** Motilal Banaras das Banglow Road, Delhi-7, 1988.

Kittel Rey. F. A : **Kannada – English dictionary** Basel Mission Books, Tract Company, Mangalore, 1894.

Kosambi D.D. : **The Culture & Civilization of Ancient India in Historical Outline** Vikas Publishing House Private Limited, Delhi, 1981.

Kosambi D.D.: **Myth & Reality** Popular Prakashan, Bombay, 1983.

Kane P.V.: **History of dhasmashastra** Bhandarkar Research Institute poona, 1941.

Krishna Murthy .K. : **Nagarjunakanda – A cultural study Concept** Publishing Company Delhi,1977.

Khare .R. S. : **Normative Culture & Kinship** Vikas Publishing House Private Limited New Delhi, 1983.

Kala Acharya Dr.: **Indian Philosophical Terms:** Glossary and Sources Somaiya Publications Pvt. Ltd. Mumbai, New Delhi, 2004.

Lucien Goldman: **Towards a Sociology of the novel** Tavistock Publications, 1975.

Lokayata : Peoples publishing House Pvt. Ltd. New Delhi, 1959.

Martin Gray: **A Dictionary of literary terms** Longman Newyork Press, 1984.

Michel Dillon : **Introduction to sociological theory** Willey Blackwell, 2010.

Michel Foucault : **The Order of things** Tavistock, 1970.

Michel Foucault : **The Archelogy of Knowlede** Tavistock Publication, 1972.

Mariappa Bhat : **Kittles Kannada – English Diet,** University of Madras, 1973.

Misra O.P.: **Mother Goddess in Central India** Agan Kala Prakashan, Delhi, 1985.

Motichandra : **The world of Courtesans** Vikas Publishing House Private Limited, Delhi,1973.

Motichandra : **The world of Courtesans** Vikas Publishing House Private Limited  Delhi, 1973.

Nilakanta Sastri (Ed): **Foreign Notices of South-India (From Megasthnes to Mahuan)** University of Madras, Madras, 1972.

Nicholas Abercrombie : **The dominant Ideology & Thesis** George Allen & univin (Publishers)  Limited, London, 1984.

Oliverheamen : **Key Concepts in Eastern Philosophy**  Routlge, 1999.

Progress Publishers : **A dictionary  of  Mascow  Scientific Communism,** 1984.

Paul De man : **Blindness and insight Essays in the Rhetorie  of Contemporary  criticism** Minnesote Press  Minnereapolies, 1983.

Ranjith Guha (Ed): **Subaltern Studies** O.U.P Delhi, 1989.

Raymond Williams : **The long revolution** Chatto & windus London, 1961.

Raymond Williams: **Marxism and Literature** Oxford University Press, 1977.

Ronald Inden : **Imagining India** Basil Blackwell, 1990.

Ranajith Guha: **Dominance without Hegemony** O.U.P, 1998.

Ramakrishna Rao K.B.Dr : **The ism of pre Classical** Sankya prasaranga University of Mysore Mysore-6, 1996.

Raymond Williams: **Keywords** Fontana Press, 1983.

Romila Thapar : **The Past and Prejudice** Nation and trust New Delhi, 1975.

Radhakrishna Mukerji: **Ancient Indian Education** Motilal Banarasidas, Delhi, 1974.

Ronald inden: **Imagining India** Basil Blackwel USA, 1990.

Sri Swami Sivananda: **All About Hinduism** A divine Life Society Publication, 1999.

S.Shettar : **Somanath alura Ruvari** abhinava Bangalore- 40, 2008.

Swami Gambhiranda: **Eight Upanisads (Vol–I) Advaita Ashrama** Calcutta –14, 1972.

Shantilal Somaiya : **Indian Philosophical terms** Somaiya Publications Pvt Ltd, Mumbai.

Schwarz Bill (Ed) : **On Ideology** Hutchison & Company, London, 1978.

Stein, Burton (Ed) : **Essays on South India** Vikas Publishing House Private Limited, New Delhi, 1976.

Stein M.A. : **Kalhana's Rajatarangini A Chronicle of Kings of Koshmir Vol-II** Motilal Banarasidas, Delhi, 1961.

Sudipta Kaviraj (Ed) : **Politics in India** Oxford University Press, 1997.

Sudipta Kaviraj and Sunil Khilnani : **Civil Society (History and Possibilities)**Cambridge University, 2001.

Terry Eagleton : **Literary theory: An Introduction** Basil Blackwell, 1989.

Vetuk Sylia(Ed) : **American Studies in the Anthropology** Manohar Publication, New Delhi, 1978.

Walter Benjamin : **Illuminations** Fontana, 1982.

Yogendra Bahadur Singh : **Social Life Ancient India** Light & Life Publishers New Delhi, 1981.

Zimmer Heinrich : **Myths & Symbols in Indian Art & Civilisation** New York : 1946



## ಲೇಖಕರ ಇತರ ಕೃತಿಗಳು

ಮಾರ್ಕ್ಸ್‌ವಾದಿ ಪರಿಕಲ್ಪನೆಗಳು

ಸ್ತ್ರೀವಾದಿ ಪರಿಕಲ್ಪನೆಗಳು

ವಿಮರ್ಶೆಯ ಪರಿಕಲ್ಪನೆಗಳು

ಸಾಂಸ್ಕೃತಿಕ ಪರಿಕಲ್ಪನೆಗಳು

ತತ್ತ್ವಜ್ಞಾನದ ಪರಿಕಲ್ಪನೆಗಳು

ಸ್ತ್ರೀವಾದಿ ಚಿಂತನೆಗಳು

ಬಹುಮುಖಿ
(ಕಾರಂತರ ಕಾದಂಬರಿಗಳ
ಸಮಾಜಶಾಸ್ತ್ರದ ಕುರಿತಾಗಿ)

ರಚನೆ - ನಿರಚನೆ
(ರಚನಾವಾದ ಮತ್ತು ನಿರಚನದ
ಕುರಿತಾಗಿ ರಚನೆ)

ಪಡು - ಮೂಡು
(ವಸಾಹತುಶಾಹಿ ಅನುಭವದ ಕುರಿತಾಗಿ)

ಪಶ್ಚಿಮ ಮತ್ತು ಗಾಂಧಿ
(ಗಾಂಧಿಯ ಕುರಿತಾಗಿ)

ನೀಲನಕ್ಷೆ

ಕ್ರಿಯೆ - ಪ್ರತಿಕ್ರಿಯೆ

ಶಬ್ದರೇಖೆ

ನಿಶಿತನ ಕೆಂಪು ಡೈರಿ ಕಾದಂಬರಿ
(ಚಿನ್ನನೊಬ್ಬನ ದಿನಚರಿ)

ಚಾರು ಚರಿತ
(ಕಾದಂಬರಿ)

ಪರಿಕಲ್ಪನೆ

ಕಲ್ಪಿಸು; ಸೃಜನಶೀಲತೆ;

ಕಲ್ಪನೆಯನ್ನು ನಿರ್ದಿಷ್ಟ ರೀತಿಯಲ್ಲಿ ಕಟ್ಟು.

ವಸಾಹತುಶಾಹಿ ಅನುಭವವೆಂದರೆ ಅದು ಯುರೋ ಕೇಂದ್ರಿತ ಆಡಳಿತ ಮತ್ತು ಮಾರುಕಟ್ಟೆಯೆಂದು ಹೇಳುತ್ತೇವೆ ಆದರೆ ಅದು ಅಷ್ಟು ಮಾತ್ರವೇ ಆಗಿರಲಿಲ್ಲ. ಅದು ಮೇಲುನೋಟದ ಹೇಳಿಕೆ ಮಾತ್ರವಾಗುತ್ತದೆ. ಆಡಳಿತ ಮತ್ತು ಮಾರುಕಟ್ಟೆಯೆಂದು ಹೇಳುತ್ತೇವೆ ಆದರೆ ಅದು ಅಷ್ಟು ಮಾತ್ರವೇ ಆಗಿರಲಿಲ್ಲ. ಅದು ಮೇಲುನೋಟದ ಹೇಳಿಕೆ ಮಾತ್ರವಾಗುತ್ತದೆ. ವಸಾಹತು ಆಡಳಿತವು ಬೇರೆ ಬೇರೆ ರೀತಿಯ ಪ್ರಭಾವವನ್ನು ಉಂಟು ಮಾಡಿತು ಅದು ಸಂಸ್ಕೃತಿಯ ಮೇಲೆ ಬೇರೆ ಬೇರೆ ಪ್ರಭಾವಗಳನ್ನು ಬೀರಿತ್ತು. ಅದರಲ್ಲಿ ಸಾಹಿತ್ಯವೂ ಒಂದು. ಕುವೆಂಪು, ಕಾರಂತ, ಬಿ.ಎಂ.ಶ್ರೀ. ಮೊದಲಾದವರು ಕನ್ನಡದಲ್ಲಿ ಹೊಸ ರೀತಿಯ ಬರವಣಿಗೆಯ ಕ್ರಮವನ್ನು ರೂಪಿಸಿಕೊಂಡರು. ಈ ರೀತಿಯ ಬರವಣಿಗೆ ಸಂಪೂರ್ಣ ಪಶ್ಚಿಮದ ಅನುಕರಣೆಯಲ್ಲ ಹಾಗೂ ಅವರು ನಗರ ಕೇಂದ್ರಿತ ಬುದ್ಧಿಜೀವಿಗಳನ್ನು ಮಾತ್ರವೇ ಉದ್ದೇಶಿಸಿಕೊಂಡು ಬರೆದಿಲ್ಲ. ಅವರ ಕಲ್ಪನೆಯಲ್ಲಿ ಇದ್ದ ಓದುಗರು ಬೇರೆ. ಅವರು ಬರೆದಿರುವುದಕ್ಕೆ ಅನೇಕ ಕಾರಣಗಳಿವೆ. ಕನ್ನಡದ ಹೊಸ ನುಡಿಗಟ್ಟುಗಳು ಪ್ರಾರಂಭವಾಗಿರುವುದು ಈ ಕಾಲ ಘಟ್ಟದಲ್ಲಿ. ಹಾಗೆಯೇ ಸಾಹಿತ್ಯಕ್ಕೆ ಹೊಸ ಮಾನ್ಯತೆಯನ್ನು ಲೇಖಕರು ರೂಪಿಸಬೇಕಾಗಿತ್ತು, ಮತ್ತು ಹೊಸ ಬರಹದ ಮಾದರಿಗಳ ಬಗೆಗೆ ಅವರು ಮಾತಾಡಬೇಕಾಗಿತ್ತು.

₹ 350/-

ISBN 938157731-5